

ಕನ್ನಡ ವಾಚನಮಾಲೆಯ

## ನಾಲ್ಕನೆಯ ಪುಸ್ತಕದ

# ಶಬ್ದಾರ್ಥವು



## ೧. ದಾದಾಭಾಯಿ ನವರೋಜಿ

(ಸ್ವ+ತಂತ್ರ) ಸ್ವತಂತ್ರ – ಸ್ವಂತದ ಆಧೀನವುಳ್ಳ

(ನಗರ+ಇಕ) ನಾಗರಿಕ – ಸುಧಾರಿಸಿದವ, ರಾಜ್ಯದಾಡಳಿತಕ್ಕೆ ಒಳಪಟ್ಟವ

ಸ್ವಾತಂತ್ರ್ಯ – ತನ್ನ ತಿಳುವಳಿಕೆಯಂತೆ ನಡೆಯುವ ಹಕ್ಕು

ರಾಷ್ಟ್ರೀಯ – ದೇಶಕ್ಕೆ ಸಂಬಂಧಿಸಿದ ಪರಮ – ಶ್ರೇಷ್ಠ

ಅಧ್ಯಕ್ಷ – ಸಭೆಯ ಹಾಗು ಸಂಘಗಳ ಕಾರ್ಯ ನಡಿಸುವ ಮುಖ್ಯಸ್ಥ, ಅಧಿಕಾ

ಜನ್ಮತಾಳು – ಹುಟ್ಟು, ಜನಿಸು    ಕುಲೀನ – ಉತ್ತಮ ಮನೆತನದವ

(ಸು+ಸಂಸ್ಕೃತ) ಸುಸಂಸ್ಕೃತ – ಒಳ್ಳೆ ಸುಧಾರಿಸಿದವ

ಲಾಲನೆ – ಮಮತೆ, ಪೋಷಣೆ    ಪಾಲನೆ – ಕಾಪಾಡುವಿಕೆ

ಉದ್ಯೋಗ ಶೀಲ – ಉದ್ಯೋಗದ (ದುಡಿತದ) ಸ್ವಭಾವದವ

ಸತ್ಯನಿಷ್ಠ – ಸತ್ಯದಲ್ಲಿ ನಂಬಿಗೆಯುಳ್ಳವ

ಪ್ರಾಥಮಿಕ – ಪಾರಂಭದ, ಮೊದಲಿನ    ವಾತ್ಸಲ್ಯ – (ಮಕ್ಕಳ ಮೇಲಿನ) ಪ್ರೀ

ಪಠ್ಯ ಪುಸ್ತಕ – ಓದಲಿಕ್ಕೆ ಗೊತ್ತು ಪಡಿಸಿದ ಪುಸ್ತಕ    ಮಮ

(ಅ+ಸಾಧಾರಣ) ಅಸಾಧಾರಣ – ಸಾಧಾರಣವಲ್ಲದ, ಹೆಚ್ಚಿನ, ಶ್ರೇಷ್ಠ

ಶಿಷ್ಯವೇತನ – ವಿದ್ಯಾರ್ಥಿಗಳಿಗೆ ದೊರೆಯುವ ಸಹಾಯ ಧನ

(ಸು+ಸೂತ್ರ) ಸುಸೂತ್ರ – ಸರಳ    (ಮುಖ್ಯ+ಅಧ್ಯಾಪಕ) ಮುಖ್ಯಾಧ್ಯಾಪ

ಧರ್ಮಭ್ರಷ್ಟ – ಜಾತಿಕೆಟ್ಟವ, ಧರ್ಮಬಿಟ್ಟವ    ಮುಖ್ಯ ಗು

ನಿಷ್ಠೆ – ನಂಬಿಗೆ, ಭಕ್ತಿ    ವೃತ್ತಿ – ಉದ್ಯೋಗ

ಸಾಮಾಜಿಕ – ಸಮಾಜಕ್ಕೆ ಸಂಬಂ ಆದರ್ಶ – ಒಳ್ಳೆಯ ಮಾದರಿ
ಧಿಸಿದ ವಿಧವಾ – ಗಂಡ ಸತ್ತವಳು
ವಿಜ್ಞಾನ – ವಿಶೇಷ ಜ್ಞಾನ, (ಪರಿ+ಶ್ರಮ) ಪರಿಶ್ರಮ – ಹೆಚ್ಚಿನ
ಶಾಸ್ತ್ರೀಯ ವಿಷಯ ದುಡಿತ
ಸೊಸಾಯಿಟಿ – ಸಂಘ ಇಂಡಿಯನ್ – ಭಾರತಕ್ಕೆ ಸಂಬಂಧಿಸಿದ
ಅಸೋಸಿಯೇಶನ್ – ಸಂಘ ಈಸ್ಟ್ – ಪೂರ್ವ
ಆಂಗ್ಲರು – ಇಂಗ್ಲೀಷರು ಹೀನದೆಸೆ – ಕೀಳುಸ್ಥಿತಿ
(ಸತ್+ಮಾನ) ಸನ್ಮಾನ – ಒಳ್ಳೆಯ ಸ್ಥಿತಿ – ಇರುವಿಕೆ
ಮರ್ಯಾದೆ ದಿವಾನ – ಮಂತ್ರಿ
(ಸಹ+ಅನುಭೂತಿ) ಸಹಾನುಭೂತಿ– (ಉತ್+ಜ್ವಲ) ಉಜ್ವನ – ಶ್ರೇಷ್ಠ,
ಕಳಕಳಿ ಹೆಚ್ಚು ಹೊಳೆಯುವ
(ಸ್ವ+ದೇಶ+ಅಭಿಮಾನ) ಸ್ವದೇಶಾಭಿಮಾನ – ತನ್ನ ದೇಶದ ಮೇಲಿನ ಪ್ರೀತಿ
ಚತುರ – ಜಾಣ (ಅಜರ+ಅಮರ) ಅಜರಾಮರ – ಮುಪ್ಪು
ಮರಣವೂ ಇಲ್ಲದ್ದು, ಶಾಶ್ವತ, ಚಿರಸ್ಮರಣೀಯ, ಚಿರಕಾಲ

**ಪಾಠದ ಸಾರ—** ದಾದಾಭಾಯಿ ನವರೋಜಿಯವರು ಮುಂಬಯಿಯಲ್ಲಿ ಗಲತಿಖರಲ್ಲಿ ಹುಟ್ಟಿದರು. ಇವರು ಪಾರಸಿ ಧರ್ಮದ ಹೆಸರಾದ ಮನೆತನದವರು.

ಇವರ ಪ್ರಾಥಮಿಕ, ಮಾಧ್ಯಮಿಕ, ಹಾಗು ಕಾಲೇಜದ ಶಿಕ್ಷಣವೆಲ್ಲ ಮುಂಬಯಿಯಲ್ಲಿಯೇ ನಡೆಯಿತು. ಇವರು ಶಿಷ್ಯವೇತನವನ್ನು ದೊರಕಿಸಿಕೊಂಡು ಅಸಾಧಾರಣ ವಿದ್ಯಾರ್ಥಿಗಳೆಂದು ಹೆಸರಾಗಿದ್ದರು.

ಕಾಲೇಜದ ಶಿಕ್ಷಣ ಮುಗಿದ ಮೇಲೆ ತಾವು ಕಲಿತ ಕಾಲೇಜದಲ್ಲಿಯೇ ಅಧ್ಯಾಪಕರಾಗಿ ನಿಷ್ಠೆಯಿಂದ ದುಡಿದರು. ಇವರು ಸಮಾಜ ಸುಧಾರಕರಾದ್ದರಿಂದ ಬಾಲಿಕಾ ವಿದ್ಯಾಲಯ, ವ್ಯಾಯಾಮಸಂಘ, ವಿಧವಾ ವಿವಾಹ ಮಂಡಲ, ವಿಜ್ಞಾನ ಸಂಘ ಇವೇ ಮೊದಲಾದವುಗಳು ಇವರ ಪರಿಶ್ರಮದಿಂದ ಹುಟ್ಟಿದವು. ಮುಂಬಯಿ ಕಾಮಾ ಕಂಪನಿಯವರು ತಮ್ಮ ಸಂಘದ ಉನ್ನತಿಗಾಗಿ ಇವರನ್ನು ಲಂಡನ್ನಿಗೆ ಕಳಿಸಿದರು. ಇವರು

ಲಂಡನ್ನಿನಲ್ಲಿ ಅನೇಕ ಸಂಘಗಳನ್ನು ಸ್ಥಾಪಿಸಿ ಭಾರತ ಇಂಗ್ಲೆಂಡಗಳ ಸಂಬಂಧವನ್ನು ಬೆಳಸಿದರು.

ಹಿಂದೀಯರ ಆಸೆ-ಆಕಾಂಕ್ಷೆಗಳನ್ನು ಈಡೇರಿಸಲು ಬ್ರಿಟಿಶ್ ಪಾರ್ಲಿಮೆಂಟಿನ ಸದಸ್ಯರಾದರು. ಅಲ್ಲಿಯ ಇವರ ಪರಿಶ್ರಮದ ಫಲವಾಗಿ ಆಂಗ್ಲರು ಕಣ್ದೆರೆದು ಭಾರತದ ಬಗ್ಗೆ ಸಹಾನುಭೂತಿ ತೋರಿಸ ಹತ್ತಿದರು. ಇವರು ಆದರ್ಶ ಶಿಕ್ಷಕರೂ, ಉಜ್ವಲ ದೇಶಾಭಿಮಾನಿಗಳೂ, ಆಗಿ ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಿಕೊಡಲು ಕಷ್ಟಪಟ್ಟವರಲ್ಲಿ ಒಬ್ಬರಾದ್ದರಿಂದ ಭಾರತದ ಇತಿಹಾಸದಲ್ಲಿ ಇವರ ಹೆಸರು ಅಜರಾಮರವಾಗಿದೆ.

**ಬಿಡಿಸಿದ ಅಭ್ಯಸನಗಳು**

೧. ದಾದಾಭಾಯಿಯವರು ಕಾಲೇಜದಲ್ಲಿ ಅಧ್ಯಾಪಕರಾಗಿದ್ದಾಗ ಒಳ್ಳೆಯ ನಿಷ್ಠೆಯಿಂದ ದುಡಿದು ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾದ್ದರಿಂದ ಆದರ್ಶ ಶಿಕ್ಷಕರೆಂದು ಹೆಸರು ಪಡೆದರು.

೨. ಇವರು ಇಂಗ್ಲಂಡದಲ್ಲಿದ್ದಾಗ 'ಲಂಡನ್-ಇಂಡಿಯನ್ ಸೊಸಾಯಿಟಿ' ಹಾಗು 'ಈಸ್ಟ್ ಇಂಡಿಯನ್ ಅಸೋಸಿಯೇಶನ್' ಎಂಬ ಸಂಘಗಳನ್ನು ತೆರೆದು ಇಂಗ್ಲಂಡದೊಡನೆ ಭಾರತದ ಸಂಬಂಧ ಬೆಳಸಿದರು. ಭಾರತದ ಹೀನ ಸ್ಥಿತಿಯನ್ನು ತಿಳಿಸಲು ಅನೇಕ ಭಾಷಣಗಳನ್ನು ಮಾಡಿದರು. ಬ್ರಿಟಿಶ್ ಪಾರ್ಲಿಮೆಂಟಿನ ಸದಸ್ಯರಾಗಿ ಭಾರತೀಯರ ಆಸೆ ಆಕಾಂಕ್ಷೆಗಳನ್ನು ವಿಶದ ಪಡಿಸಿ ಆಂಗ್ಲರ ಸಹಾನುಭೂತಿ ಪಡೆದರು.

೩. ಎಲ್ಫಿನ್‌ಸ್ಟನ್ ಕಾಲೇಜದ ಅಧ್ಯಾಪಕ ಸ್ಥಾನವೂ, ಬ್ರಿಟಿಶ್ ಪಾರ್ಲಿಮೆಂಟಿನ ಸದಸ್ಯಸ್ಥಾನವೂ, ಬಡೋದೆಯ ದಿವಾಣಗಿರಿಯ ಸ್ಥಾನವೂ ಇವರಿಗೆ ದೊರೆತಿದ್ದವು. ಇವು ಅವರಿಗೆ ಒಳ್ಳೆಯ ಗೌರವದ ಸ್ಥಾನಗಳು.

---

# ೨. ನೊಲದ ಜಾಣತನ

ಬನಸಿರಿ – ಅಡವಿಯ (ತೋಟದ) ಸೌಂದರ್ಯ

ಬರಿಯ ಬಯಲಾಗು – ಹಾಳಾಗು

ವಿಶ್ರಮಿಸು – ದಣುವಾರಿಸಿಕೊಳ್ಳು

| | |
|---|---|
| ಬಳ್ಳಲು – ದಣಿ | ಬಂಧುಗಳು – ಆಪ್ತರು |
| ಪುಷ್ಕರಣಿ – ದೊಡ್ಡ ಕೆರೆ, ಸರೋವರ | ಕಂಗೊಳಿಸು – ಕಣ್ಣಿಗೆ ಕಾಣು ಶೋಭಿಸು |
| ಪ್ರಕಾಶಮಾನ – ಹೊಳೆಯುವ | |
| (ಪ್ರ+ಶಾಂತ) ಪ್ರಶಾಂತ – ಸದ್ದಿಲ್ಲದ, ಬಹಳ ಶಾಂತವಾದ | ಸಮೇತ – ಸಹಿತ |
| | ದಿಟ್ಟಿಸಿ – ಕಣ್ಣುಬಿಟ್ಟು |
| ಕಲಕು – ಹೊಲಸು | ಭಾಸವಾಗು – ತೋರು |
| ಪ್ರಕಾಶ – ಬೆಳಕು | ಪ್ರದೇಶ – ಸ್ಥಳ |
| ವಾಹನ – ಹತ್ತಿಕೊಂಡು ಹೋಗುವ | ತಲೆದೂಗು – ಅಹುದೆನ್ನು |

ಸಾಧನ

**ಪಾಠದ ಸಾರ—** ಒಂದು ಸುಂದರವಾದ ಬನದಲ್ಲಿ ಹಲವು ಆನೆಗಳಿದ್ದವು. ಒಮ್ಮೆ ಮಳೆ ಬೀಳದೆ ಆ ಪ್ರದೇಶದ ನೀರೆಲ್ಲ ಬತ್ತಿ ಹೋಯಿತು. ಆನೆಗಳು ಆ ಬನವನ್ನು ಬಿಟ್ಟು ಬಹಳ ದಾರಿ ನಡೆದ ಮೇಲೆ ಚಂದ್ರ ಪುಷ್ಕರಣಿ ಎಂಬ ಕೆರೆ ಕಂಡು, ಅದರ ನೆರೆಯ ಅಡವಿಯಲ್ಲಿ ಇರಹತ್ತಿದವು. ಅಲ್ಲಿಯೇ ಕೆಲವು ಮೊಲಗಳು ವಾಸವಾಗಿದ್ದವು. ಮೊಲಗಳಿಗೆ ಆನೆಗಳ ಕಾಟ ಬಹಳವಾಯಿತು. ಅವುಗಳ ತುಳಿತಕ್ಕೆ ಎಷ್ಟೋ ಮೊಲಗಳು ಸತ್ತವು. ಇದನ್ನು ತಿಳಿದು ಒಂದು ಹಿರಿ ಮೊಲವು, ಒಂದು ಹುಣ್ಣಿವೆಯ ದಿನ ರಾತ್ರಿ ಪುಷ್ಕರಣಿಯ ಬಳಿಯಲ್ಲಿರುವ ಆನೆಗಳ ಹತ್ತಿರ ಬಂದು— "ನಾನು ಚಂದ್ರನ ದೂತನು. ಇದು ಚಂದ್ರನ ಕೆರೆ, ಚಂದ್ರನು ದಿನಾಲು ರಾತ್ರಿ ಇಲ್ಲಿಯೇ ಮಲಗುವನು. ನೀವು ದಿನಾಲು ಕೆರೆಯ ನೀರು ಕಲಕು ಮಾಡಿ ಚಂದ್ರನ ನಿದ್ದೆ ಕೆಡಿಸುತ್ತಿರುವಿರಿ ಆತನು ಕೋಪಗೊಂಡಿದ್ದಾನೆ. ಕೂಡಲೆ ಕೆರೆಬಿಟ್ಟು ದೂರ ಸಾಗಿರಿ. ಇಲ್ಲವಾದರೆ ನಿಮ್ಮನ್ನು ನಾಶಮಾಡುವನು." ಎಂದು ಹೇಳಿತು.

ಆನೆಗಳು ಕೆರೆಯಲ್ಲಿ ಹೊಯ್ದಾಡುವ ಚಂದ್ರ ಬಿಂಬವನ್ನು ನೋಡಿ ಮೊಲದ ಮಾತು ನಿಜವೆಂದು ತಿಳಿದು, ತಮ್ಮನ್ನು ಕ್ಷಮಿಸಬೇಕೆಂದು ಚಂದ್ರನಿಗೆ ನಮಿಸಿ ಆ ಅಡವಿ ಬಿಟ್ಟು ಬೇರೆ ಪ್ರದೇಶಕ್ಕೆ ಹೊರಟು ಹೋದವು. ಆ ಅರಸು (ಹಿರಿ) ಮೊಲವು ತನ್ನ ಬಂಧುಗಳೊಡನೆ ಸುಖದಿಂದ ಕಾಲ ಕಳೆಯಿತು.

ಶಕ್ತಿಯಿಂದ ಆಗದ ಕೆಲಸಗಳನ್ನು ಮೊಲದಂತೆ ಹಂಚಿಕೆಯಿಂದ ಮಾಡಿಕೊಳ್ಳಬೇಕು.

## ಬಿಡಿಸಿದ ಅಭ್ಯಾಸಗಳು

೧. ಆನೆಗಳು ಚಂದ್ರಪುಷ್ಕರಣಿ ಎಂಬ ಕೆರೆಗೆ ಬಂದವು.

೨. (ಪಾಠದ ಸಾರದಲ್ಲಿ ಅವತರಣಿಕೆಯೊಳಗೆ ಕೊಟ್ಟ, ಹಿರಿ ಮೊಲವು ಹೇಳಿದ ವಾಕ್ಯಗಳನ್ನು ಹೇಳಬೇಕು.)

೩. "ಚಂದ್ರದೇವನೇ, ಇದೊಂದು ಸಾರೆ ಕ್ಷಮಿಸಬೇಕು. ಈ ಸ್ಥಳವನ್ನು ಬಿಟ್ಟು ನಾವು ಈಗಲೇ ಹೊರಡುವೆವು. ಇನ್ನೆಂದೂ ಮರ ಬರುವದಿಲ್ಲ" ಎಂದು ಬೇಡಿಕೊಂಡವು.

೪. ಕೊಟ್ಟ ಶಬ್ದಗಳ ಮುಂದೆ ವಿರುದ್ಧಾರ್ಥದ ಶಬ್ದಗಳನ್ನು ಹೇಳಿದೆ ಹಲವು—ಕೆಲವು, ಹಿರಿ—ಕಿರಿ, ತಿಳಿ—ರಾಡಿ (ಕಲಕು), ದೂರ—ಸಮೀಪ, ಸುಖ—ದುಃಖ.

೫. ದಪ್ಪಕ್ಷರಗಳಿಂದ ತೋರಿಸಿದ ಶಬ್ದಗಳು ವಾಕ್ಯದಲ್ಲಿ ಉಪಯೋಗಿಸಲಿಕ್ಕೆ ಕೊಟ್ಟ ಶಬ್ದಗಳಿರುವವು.

(೧) ಗುರುಗಳು ಶಿಷ್ಯನ ಮೇಲೆ ಕೋಪಗೊಂಡಿದ್ದಾರೆ. (೨) ಕೃಷ್ಣನು ಅಪವಾದಕ್ಕೆ ಗುರಿಯಾದನು. (೩) ರಾಮನು ವೈಲೀ ಬೇನೆಯಲ್ಲಿ ಅಂಗಹೀನನಾದ್ದರಿಂದ ಅವನ ಆಶೆಯೆಲ್ಲ ಬರಿಯ ಬಯಲಾಯಿತು. (೪) ದಾರಿಕಾರರು ಬಿಸಲಿನ ತಾಪಕ್ಕೆ ಬಾಯಾರಿ ಬಳಲಿದರು. (೫) ಬಾಲಕರ ದಿನಾಚರಣೆಯಲ್ಲಿ ಆ ಚಿಕ್ಕ ಮಗುವಿನ ಭಾಷಣ ಕೇಳಿ ಎಲ್ಲರೂ ತಲೆದೂಗಿದರು.

---

# ೩. ಬಾಳೆ

ನಿರೀಕ್ಷಿಸು – ಪರೀಕ್ಷೆಮಾಡಿನೋಡು
ಗೊನೆ – ಕಾಯಿಗಳ ಗೊಂಚಲು
ಶೋಭೆ – ಸೌಂದರ್ಯ, ಚಂದ
ನೆಡು – ಊರು
ಬಾಳು – ಜೀವನ
ಸಂತತಿ – ಪೀಳಿಗೆ, ವಂಶ
ಒಂದೇಫಲ – ಒಂದೇ ಸಂತತಿ
ಸತತ – ಯಾವಾಗಲೂ

ಮೇಜವಾನಿ – ಪ್ರೀತಿಯ ಊಟ   ಪೊಟ್ಟಣ – ಪುಡಿಕೆ
ಮೂಡಿಗೆ – ಗಂಟು   ಪಂಕ್ತಿ – ಜೋಡಿಯ ಊಟ
ವ್ಯರ್ಥವಾಗು – ಉಪಯೋಗವಿಲ್ಲದಾಗು

**ಪಾಠದ ಸಾರ—** ಮೇಲೆ ಮೇಲೆ ನೀರು ಸಿಗುವ ಕಸುವಿನ ಭೂಮಿಯಲ್ಲಿ ಬಾಳೆಯು ಬೆಳೆಯುವದು. ತೋಟದಲ್ಲಿ ಮಡಿಮಾಡಿ ತಗ್ಗು ತೆಗೆದು, ಗೊಬ್ಬರ ಹಾಕಿ ಬಾಳೆಯ ಗಡ್ಡೆಗಳನ್ನೂ, ಮರಿಗಳನ್ನೂ ನೆಡುವರು. ಇವಕ್ಕೆ ಮೊಳಕೆ ಒಡೆದು ಎಲೆಬಿಡುವವು. ಎಲೆಗಳು ಬಹಳ ದೊಡ್ಡವಾಗಿರುವವು. ಕೆಲವು ತಿಂಗಳಲ್ಲಿ ಹೂವಿನ ಹೊಡೆಬಿಟ್ಟು ಹೂವಿಗೊಂದು ಕಾಯಿಬಿಡುವದು. ಒಂದೊಂದು ಗಿಡಕ್ಕೆ ಇಪ್ಪತ್ತರ ವರೆಗೆ ಹಣಿಗೆಗಳಿರ ಬಹುದು. ಗಿಡದಲ್ಲಿ ಹಣ್ಣಾದ ಮೇಲೆ ಗೊನೆ ಇಳಿಸುವರು ಇಲ್ಲವೆ ಬಲಿತ ಕಾಯಿಗಳ ಗೊನೆ ಇಳಿಸಿ, ಹುಲ್ಲಿಗೆ ಹಾಕಿ ಹಣ್ಣು ಮಾಡುವರು. ಬಾಳೆಗೆ ಒಂದೇ ಫಲ.

ಬಾಳೆಯಲ್ಲಿ ಕದಳಿ ಕರಿ ಬಾಳೆ, ಬೂದು ಬಾಳೆ, ಹಸುರು ಬಾಳೆ, ಮಿಟ್ಟಿ ಬಾಳೆ, ರಸ ಬಾಳೆ ಹೀಗೆ ಅನೇಕ ಜಾತಿಗಳು ಅವೆ. ಬಾಳೆಯ ಗಿಡವು ಎಲ್ಲ ಬಗೆಯಿಂದ ಉಪಯುಕ್ತವಾದದ್ದು. ಬೊಡ್ಡೆಯ ದಿಂಡಿನಿಂದಲೂ, ಕಾಯಿಗಳಿಂದಲೂ ಪಲ್ಯ ಮಾಡುವರು. ಬೊಡ್ಡೆಯ ಹೊರಗಿನ ಹಾಳೆಯಿಂದ ಮೂಡಿಗೆ ಕಟ್ಟುವರು. ಒಣಗಿಸಿ ನಾರು ಮಾಡುವರು. ಪೂಜಾಮಂಟಪ, ಲಗ್ನ ಮಂಟಪಗಳಿಗೆ ಬಾಳೆಯ ಕಂಬ ಕಟ್ಟುವರು. ಊಟಕ್ಕೆ ಎಲೆಬೇಕು. ಹಣ್ಣು ದೇವರ ನೈವೇದ್ಯಕ್ಕೂ, ತಿನ್ನಲಿಕ್ಕೂ, ಸೀಕರಣೆ ಮಾಡಲಿಕ್ಕೂ ಬೇಕು.

## ಬಿಡಿಸಿದ ಅಭ್ಯಾಸನಗಳು

೭. ಸಿಹಿ ಹಣ್ಣುಗಳು— ಬಾಳೆ, ಅಂಜೀರ, ಮಾವು, ಮೋಸಂಬಿ, ನೇರಲ. ಹುಳಿ ಹಣ್ಣುಗಳು — ಹುಣಿಸೆ, ಲಿಂಬೆ, ಸೇಬು, ಬೋರೆ, ಕವಳೆ.

೮. (ಅ) ತನ್ನ ಜೀವನದಲ್ಲಿ ಬಾಳೆಯು ಒಂದೇ ಗೊನೆ ಬಿಟ್ಟು ಫಲ ಕೊಡುವದು. ಮುಂದೆ ಫಲ ಕೊಡುವದಿಲ್ಲ. ಗಿಡವನ್ನು ಕಡಿದು

ಹಾಕುವರು. ಆದ್ದರಿಂದ ಗೊನೆ ಕೊಯ್ದ ಬಳಿಕ ಬಾಳೆಯು ಬಾಳ ಮುಗಿದಂತಾಯಿತು.

(ಆ) ಬಾಳೆಯು ಒಂದೇ ಸಾರೆ ಒಂದೇ ಗೊನೆಯನ್ನು ಮಾತ್ರ ಬಿಟ್ಟು ಫಲ ಕೊಡುವದು. ತಿರುಗಿ ಗೊನೆ ಬಿಡುವದೇ ಇಲ್ಲ. ಆದ್ದರಿಂ ಬಾಳೆಗೆ ಒಂದೇ ಫಲ.

೯. ಪಾಠ ಚನ್ನಾಗಿ ಓದಿ, ಅದರ ಸಾರವನ್ನು ನಿಬಂಧ ರೂ ವಾಗಿ ಬರೆಯಿರಿ.

---

# ೪. ನನ್ನ ಕನ್ನಡ ನಾಡು

### ೧ ನೇ ನುಡಿ

ಎದೆ – ಹೃದಯ, ಮನಸ್ಸು        ಸಂತಸ – ಸಂತೋಷ

ಬೀಡು – ವಾಸಸ್ಥಳ

**ಸರಳಾರ್ಥ—** ಇದು ನನ್ನ ನಾಡು. ನನ್ನ ಕನ್ನಡದ ನಾಡು. ನನ್ನ ಮನಸ್ಸಿಗೆ ಸವಿಯಾದ ಹಾಡು. ನನ್ನ ಕರ್ನಾಟಕವೇ ನ ರಾಜ್ಯವು. (ಇದು) ನನ್ನ ಸಂತೋಷದ ವಾಸಸ್ಥಳವು ಕಂಡೆಯಾ!

### ೨ ನೇ ನುಡಿ

ಪಾವನ – ಪವಿತ್ರ, ಶುದ್ಧ        ಭೂಷಿತ – ಶೋಭೆಯುಳ್ಳ, ಅಲಂಕೃತ

**ಸರಳಾರ್ಥ—** (ನಾನು) ಕರ್ನಾಟಕದಲ್ಲಿ ಹುಟ್ಟಿ, ಕರ್ನಾಟಕದ ಧೂಳಿಯಿಂದಲೇ ಪವಿತ್ರನಾದೆನು. ಕರ್ನಾಟಕದಲ್ಲಿಯೇ ಬೆಳೆದು ಕರ್ನಾಟಕದ ಭಾಷೆಯಿಂದ (ನುಡಿಯಿಂದ) ಅಲಂಕೃತನಾದೆನು. (ಶೋಭೆಯನ್ನು ಹೊಂದಿರುವೆನು.)

### ೩ ನೇ ನುಡಿ

ಕಮನೀಯ – ಮನೋಹರವಾದ ಸಂತೋಷಕಾರಕ        ಎದೆಸೋಲು – ಮನಸು ಕರಗು, ಮನ ಸೋಲು, ಮರುಳಾಗ

ಸಿರಿ – ಸಂಪತ್ತು, ಕಾಂತಿ

ಸರಳಾರ್ಥ— ಕನ್ನಡ ನಾಡಿನ ಭಾಷೆ, ಕನ್ನಡ ನಾಡಿನ ಸಂಸ್ಕೃತಿ (ಇವುಗಳನ್ನು) ಜಗತ್ತಿನಲ್ಲಿ ಎಲ್ಲಿಯೂ ಕಾಣಲಾರೆನು. ಕನ್ನಡ ನುಡಿ ಯೆಂಬ ಕೋಗಿಲೆಯ ಮನೋಹರವಾದ ಗಾಯನಕ್ಕೆ ದೇವವಾಣಿಯಾಗಿಯೂ ಮನಸೋತಿರುವೆನು!

### ೪ ನೇ ನುಡಿ

ಸೊಗಸು – ಸಂತೋಷ, ಪುಸಸಿನ (ಸವಿದು+ಸವಿದ) ಸವಿಸವಿದು – ರುಚಿ ಕಿತ ನೋಡಿ

(ಕೊತ್ತಿಗೆ+ಕೊತ್ತಿಗೆ) ಕೊತ್ತುಕೊತ್ತಿಗೆ – ತಕ್ಕ ಸಮಯಕ್ಕೆ, ಸೀಲಿಂದಮೇಲೆ

ಸರಳಾರ್ಥ— ಕನ್ನಡ ನಾಡಿನಲ್ಲಿ ಹುಟ್ಟಿ, ಮುಂಜಾವಿನಲ್ಲಿ ಎದ್ದು ಸಂಜೆಯವರೆಗೆ ನನ್ನ ತಾಯಿ ನಾಡಿನ ನೇರೆ ಹಾಡುಕಟ್ಟಿ (ಹಾಡಿ) ಕಾಡಿನಲ್ಲಿ ಬಾಡಿಹೋಗುವೆನು.

### ಬಿಡಿಸಿದ ಅಭ್ಯಸನಗಳು

೧. ಈ ಪಾಠದಲ್ಲಿ ಕನ್ನಡ ನಾಡಿನ ವರ್ಣನೆಯಿದೆ.

೨. ಕವಿಯಲ್ಲಿಯ ಕನ್ನಡ ನಾಡು ನುಡಿಗಳ ಬಗ್ಗೆ ಇರುವ ಅಭಿಮಾನವೂ, ಪ್ರೀತಿಯೂ ಒಡೆದು ಕಾಣುವವು.

೩. (ಮೂರನೇ ನುಡಿಯ ಭಾವವನ್ನು ಹೇಳಬೇಕು.)

೪. (ನಾಲ್ಕನೇ ನುಡಿಯ ಭಾವವನ್ನು ಹೇಳಬೇಕು.)

೫. ಕಾಡಿನಲ್ಲಿ ಬಾಡುವೆನೆಂದು ಕವಿಯು ಅನ್ನುವನು.

೬. ಸಂತಸದ ಬೀಡು – ಸಂತೋಷದ ವಾಸಸ್ಥಳ, ಪಾವನ – ಪವಿತ್ರ ಭೂಷಿತನಾಗು – ಅಲಂಕೃತನಾಗು, ಶೋಭಿಸೆಂದು ಕಮನೀಯ – ಮನೋಹರ, ಎದೆಸೋಲು – ಮನಸೋಲು, ಮನಕರಗು; ಸೊಗಸು – ಸಂತೋಷ ಚಂದ.

---

# ೫. ವಾರದ ಮಲ್ಲಪ್ಪನವರು

ಗಡಿ – ಸೀಮೆ, ಮೇರೆ          ಶಿವಶರಣ – ಶಿವಭಕ್ತ

ಪರಮ - ಶ್ರೇಷ್ಠ, ಹೆಚ್ಚಿನ ಕುಶಾಗ್ರ – ಚುರುಕು
ಪ್ರಾವೀಣ್ಯ – ನಿಪುಣತೆ ಹಂಬಲ – ಕುತೂಹಲ, ಹೆಚ್ಚಿನ
ಪ್ರಾಮಾಣಿಕ – ನಂಬಿಗೆಯವ ಬಯಕೆ
(ಸತ್+ಗುಣ) ಸದ್ಗುಣ, ಒಳ್ಳೆಯ ಅನ್ಯಾಯ – ನೀತಿ ಬಿಟ್ಟಿದ್ದು
ಗುಣ ಸರಕು – ಜಿನಸು
ಅನುಸರಿಸು – ಹಿಂಬಾಲಿಸು ಅನುವು – ಇಂಬು, ಸ್ಥಳ, ಮಾರ್ಗ
ಆಸಕ್ತಿ – ಪ್ರೀತಿ, ಅಭಿರುಚಿ ಮಾರ್ಗದರ್ಶಕ - ಹಾದಿತೋರಿಸುವವ
ಕಳವಳ – ಮರುಗೋಣ, ಚಿಂತೆ ಅಂಗಹೀನ – ಅವಯವ ಕಳೆದು
(ಶಾಸ್ತ್ರ+ಅಧ್ಯಯನ) ಶಾಸ್ತ್ರಾಧ್ಯಯನ– ಶಾಸ್ತ್ರಗಳನ್ನು ಕಲಿಯೋಣ, ಕೊಂಡವ
ದುರ್ದೆಸೆ – ಕೆಟ್ಟ ಸ್ಥಿತಿ ಬಾಯಿಬಿಡು – ಕಳವಳಗೊಳ್ಳು
ಎತ್ತಿದ ಕೈ – ಮೇಲಾದ ಕೈ ಅನ್ನಛತ್ರ– ಬಂದವರಿಗೆಪುಕ್ಕಟೆಯಾಗಿ
ಅಭಿರುಚಿ - ಪ್ರೀತಿ ಅನ್ನಕೊಡುವ ಮನೆ
(ಅನು+ಅರ್ಥಕ) ಅನ್ವರ್ಥಕ – ಅರ್ಥಕ್ಕೆ ತಕ್ಕ, ಹೆಸರಿಗೆ ತಕ್ಕ
ಧ್ಯೇಯ – ಗುರಿ ವರ್ತಕ – ವ್ಯಾಪಾರಸ್ಥ
ಸ್ಫೂರ್ತಿ – ಹುಮ್ಮಸ್ಸು, ಹುರುಪು

**ಪಾಠದ ಸಾರ—** ವಾರದ ಮಲ್ಲಪ್ಪನವರು ಸೊಲ್ಲಾಪುರದ ಶಿವಶರಣರ ಹೆಸರಾದ ಮನೆತನದಲ್ಲಿ ಹುಟ್ಟಿದರು. ಕುಶಾಗ್ರ ಬುದ್ಧಿಯ ಮಲ್ಲಪ್ಪನವರು ಪ್ರಾಮಾಣಿಕ ವ್ಯಾಪಾರಸ್ಥರಾಗಿ ಮುಂಬಯಿ–ಪುಣೆಗಳ ಸಂಗಡ ವ್ಯಾಪಾರ ಬೆಳೆಯಿಸಿ ಸಿರಿವಂತರಾದರು. ಒಕ್ಕಲತನದಲ್ಲಿ ಆಸೆಯುಳ್ಳ ಇವರು ತಮ್ಮ ಸ್ವಂತ ಹೊಲಗಳಲ್ಲಿ ಹೊಸ ಸುಧಾರಣೆ ಮಾಡಿ ತಮ್ಮ ಶ್ರೀಮಂತಿಕೆಯನ್ನು ಮತ್ತಷ್ಟು ಬೆಳೆಸಿದರು.

ಇವರು ಧಾರ್ಮಿಕ, ಸಾಮಾಜಿಕ ಕಾರ್ಯಗಳಿಗೆ ವಿಶೇಷ ಧನಸಹಾಯ ಸಲ್ಲಿಸುತ್ತಿದ್ದರು. ಬಡಬಗ್ಗರಿಗೂ, ಅಂಗಹೀನರಿಗೂ, ವಿದ್ಯಾರ್ಥಿಗಳಿಗೂ ಮುಕ್ತಹಸ್ತದಿಂದ ದುಡ್ಡಿನ ಸಹಾಯ ಮಾಡುತ್ತಿದ್ದರು. ಬರಗಾಲದಲ್ಲಿ ಅನ್ನಛತ್ರಗಳನ್ನಿಟ್ಟು ಜನರನ್ನು ಬದುಕಿಸಿದರು. ಮಲ್ಲಪ್ಪನವರು ಪ್ರಾಮಾಣಿಕರೂ, ಧಾರ್ಮಿಕರೂ, ದಾನಶೂರರೂ ಆಗಿ ಕೀರ್ತಿಪಡೆದಿರುವರು.

ವಿ. ವಿ. ಗುಡಿ—ಗುಂಡಾರ, ಬಡ—ಬಗ್ಗರು, ಎಂಬ ನುಡಿಗಳಿಗೆ 'ಜೋಡುನುಡಿ' ಎಂಬ ಹೆಸರು. ಈ ನುಡಿಗಳಲ್ಲಿ ಎರಡನೇ ಶಬ್ದಗಳಿಗೆ ನಿಶ್ಚಿತ ಅರ್ಥವಿಲ್ಲ.

## ಬಿಡಿಸಿದ ಅಭ್ಯಸನಗಳು

೧. ಸೊಲ್ಲಾಪುರದಲ್ಲಿರುವ ಅನೇಕ ಶಿವಭಕ್ತರ ಮನೆತನದಲ್ಲಿ ವಾರದವರ ಮನೆತನವು ಪ್ರಸಿದ್ಧವಾಗಿದೆ.

೨. ತಮ್ಮ ಮನೆತನದ ಉದ್ಯೋಗವಾದ ವ್ಯಾಪಾರಕ್ಕೆ ಉಪಯೋಗ ಬೀಳುವ ಲೆಕ್ಕ-ಪತ್ರ-ಜಮಾಖರ್ಚುಗಳಲ್ಲಿ ಪ್ರಾವೀಣ್ಯವನ್ನು ಪಡೆದದ್ದರಿಂದಲೂ, ಇಂಗ್ಲೀಷ ಮೊದಲಾದ ಹೆಚ್ಚಿನ ವಿದ್ಯೆ ಕಲಿಯಲು ತಂದೆಯವರ ಒಪ್ಪಿಗೆ ದೊರೆಯಲಿಲ್ಲವಾದ್ದರಿಂದಲೂ ಮಲ್ಲಪ್ಪನವರು ಹೆಚ್ಚು ವಿದ್ಯಾಭ್ಯಾಸವನ್ನು ಮಾಡಲಿಲ್ಲ.

೩. ಇವರು ಪ್ರಾಮಾಣಿಕ ವ್ಯಾಪಾರಸ್ಥರಾಗಿದ್ದರು. ಅನ್ಯಾಯಕ್ಕೆ ಹೇಸುತ್ತಿದ್ದರು. ಅನ್ಯಾಯದಿಂದ ಗಳಿಸಿದ ಹಣವು ಮಣ್ಣಿಗೆ ಸರಿಯೆಂದು ತಿಳಿದಿದ್ದರು. ಆದ್ದರಿಂದ ಮಲ್ಲಪ್ಪನಪ್ಪನವರು ಒಳ್ಳೆಯ ವ್ಯಾಪಾರಸ್ಥರಾಗಿದ್ದರೆಂದು ಹೇಳಬಹುದು.

೪. ಒಕ್ಕಲತನದ ಮೇಲೆ ಆಸಕ್ತಿಯುಳ್ಳ ಮಲ್ಲಪ್ಪನವರು ಒಕ್ಕಲುತನವನ್ನು ಸುಧಾರಿಸಲಿಕ್ಕೆ ಬೇಕಾಗುವ ಹೊಸ ಜ್ಞಾನವನ್ನು ಸಂಪಾದಿಸಿ, ತಮ್ಮ ಸ್ವಂತ ಹೊಲದಲ್ಲಿ ಹಲವುತರದ ಸುಧಾರಣೆ ಮಾಡಿ, ತಮ್ಮ ಮನೆತನದ ಸಿರಿವಂತಿಕೆಯನ್ನು ಮತ್ತಿಷ್ಟು ಬೆಳಿಸಿದರು. ಹೀಗೆ ಮಲ್ಲಪ್ಪನವರು ಒಕ್ಕಲಿಗರಿಗೆ ಮಾರ್ಗದರ್ಶಕರಾಗಿದ್ದರು.

೫. ಮಲ್ಲಪ್ಪನವರಲ್ಲಿ ಪರೋಪಕಾರವೆಂಬ ದೊಡ್ಡ ಗುಣವಿತ್ತು.

೬. ಬರಗಾಲದಲ್ಲಿ ಜನರು ಅನ್ನವಿಲ್ಲದೆ ಬಾಯಿಬಿಡುವದನ್ನು ಕಂಡು ಅಲ್ಲಲ್ಲಿಗೆ ಅನ್ನಛತ್ರಗಳನ್ನಿಟ್ಟು ಜನರನ್ನು ಬದುಕಿಸಿದರು. ಆ ಜನರು ಕೃತಜ್ಞತೆಯಿಂದ ಮಲ್ಲಪ್ಪನವರಿಗೆ "ಅಪ್ಪಾಸಾಹೇಬ" ಎಂದು ಕರೆದರು.

೭. ಇವರು ಧರ್ಮಗ್ರಂಥಗಳನ್ನು ಮುದ್ರಿಸಿ ಜನರಲ್ಲಿ ಹಂಚಿದರು. ಶಾಸ್ತ್ರಾಧ್ಯಯನ ಮುಂತಾದ ವಿದ್ಯೆ ಕಲಿಯುವ ವಿದ್ಯಾರ್ಥಿಗಳಿಗೆ ಅನೇಕ ಬಗೆಯಿಂದ ಸಹಾಯ ಮಾಡುತ್ತಿದ್ದರು. ಆದ್ದರಿಂದ ಇವರಿಗೆ ವಿದ್ಯೆಯ

ಲ್ಲಿಯೂ ಆಸಕ್ತಿ ಇತ್ತೆಂದು ಗೊತ್ತಾಗುವದು.

೮. ಬಡಬಗ್ಗರು, ಅಂಗಹೀನರು, ಬಡವಿದ್ಯಾರ್ಥಿಗಳು ಇವರಿಗೆ ಹೆಚ್ಚಿನ ಸಹಾಯ ಮಾಡುತ್ತಿದ್ದರು.

ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ದಪ್ಪಕ್ಷರಗಳಿಂದ ತುಂಬಿದೆ.

(೧) ಕೊಲ್ಲಾಪುರದಲ್ಲಿ **ಶಿವಭಕ್ತರ** ಮನೆಗಳಿವೆ. (೨) ಮಲ್ಲಪ್ಪನವರು **ಬಸವಣ್ಣನವರ** ಪರಮ ಭಕ್ತರು. (೩) ಒಕ್ಕಲುತನದಲ್ಲಿ ಮಲ್ಲಪ್ಪನವರಿಗೆ ಬಲು **ಆಸಕ್ತಿ**. (೪) ಸಾಮಾಜಿಕ ಕಾರ್ಯಗಳಿಗಂತೂ ಇವರದು **ಎತ್ತಿದ ಕೈ**. (೫) ಮಲ್ಲಪ್ಪನವರಿಗೆ **"ಅಪ್ಪಾಸಾಹೇಬ"** ಎಂಬುದು ಅನ್ವರ್ಥಕ ನಾಮವಾಯಿತು.

ಕೊಟ್ಟ ಶಬ್ದಗಳ ಮುಂದೆ ವಿರುದ್ಧಾರ್ಥ ಹೇಳುವ ಶಬ್ದಗಳನ್ನು ಕೊಟ್ಟಿದೆ.

ಸತ್ಯ—ಅಸತ್ಯ, ನ್ಯಾಯ—ಅನ್ಯಾಯ, ಪ್ರಾಮಾಣಿಕ—ಅಪ್ರಾಮಾಣಿಕ ಬಡತನ—ಸಿರಿತನ, ಕಹಿ—ಸಿಹಿ.

ಕೆಳಗಿನ ಶಬ್ದಗಳಿಗೆ ಅವುಗಳ ಮುಂದೆ ಅರ್ಥ ಹೇಳಿದೆ.

ಎತ್ತಿದ ಕೈ – ಮೇಲಾದ ಕೈ ಮಾರ್ಗದರ್ಶಕರು – ಹಾದಿತೋರಿಸುವವರು ಮಣ್ಣಿಗೆ ಸರಿ – ಮಣ್ಣಿಗೆ ಸಮಾನ, (ಉಪಯೋಗಕ್ಕೆ ಬಾರದು).

---

# ೬. ನನ್ನ ಸಲುವಾಗಿ ಯಾರೂ ದುಡಿಯುವದಿಲ್ಲ

(ನಿಡಿದು+ಉಸಿರು) ನಿಟ್ಟುಸಿರು—ಉದ್ದವಾದ ಉಸಿರು ನ್ಯಾಯ – ನೀತಿ ಅಕಸ್ಮಾತ್ತಾಗಿ – ಒಮ್ಮೆಲೆ, ಸಹಜವಾಗಿ ಪರಿಚಯದವ – ಗುರುತಿನವ ದೋಷ – ತಪ್ಪು, ಅಪರಾಧ

**ಪಾಠದ ಸಾರ—** ನನ್ನ ಸಲುವಾಗಿ ಯಾರೂ ದುಡಿಯುವದಿಲ್ಲ; ಎಂದು ಒಬ್ಬ ಮುದುಕಿಯು ಆಡುತ್ತಿದ್ದುದನ್ನು ಆಕೆಯ ಪಂಚಯದ ಒಬ್ಬ ಒಕ್ಕಲಿಗನು ಕೇಳಿ; ಅನೇಕ ಉದಾಹರಣೆಗಳನ್ನು ಕೊಟ್ಟು ಎಲ್ಲರೂ ಎಲ್ಲರ ಸಲುವಾಗಿ ದುಡಿಯುವರೆಂದು ಸಿದ್ಧ ಮಾಡಿಕೊಟ್ಟನು

ಪ್ರತಿಯೊಬ್ಬನಿಗೆ ತನಗೆ ಬೇಕಾಗುವ ಎಲ್ಲ ಸರಕುಗಳನ್ನು ತಾನೇ ಹುಟ್ಟಿಸಿಕೊಳ್ಳುವದೂ, ತನ್ನ ಎಲ್ಲ ಕೆಲಸಗಳನ್ನು ತಾನೇ ಮಾಡಿಕೊಳ್ಳುವದೂ ಎಂದಿಗೂ ಶಕ್ಯವಿಲ್ಲ. ಯಾವನೊಬ್ಬನು ತನ್ನಿಂದಾಗುವ ಯಾವದೊಂದು ಕೆಲಸವನ್ನು ಮಾಡಬಲ್ಲನು. ಒಂದೇ ಬಗೆಯ ಒಡವೆಗಳನ್ನು ತನಗೆ ಸಾಕಾಗಿ ಉಳಿಯುವಷ್ಟು ಹುಟ್ಟಿಸಬಹುದು. ತನ್ನಲ್ಲಿ ಹೆಚ್ಚಾದ ಒಡವೆಗಳನ್ನು ಜನರಿಗೆ ಕೊಟ್ಟು, ತನಗೆ ಬೇಕಾದ ಒಡವೆಯನ್ನು ಅದಲು ಬದಲು ಮಾಡಿ ಪಡೆಯಬಹುದು. ಆದ್ದರಿಂದ ಎಲ್ಲರೂ ಒಂದಿಲ್ಲೊಂದು ರೀತಿಯಿಂದ ಎಲ್ಲರ ಸಲುವಾಗಿ ದುಡಿಯುತ್ತಾರೆಂದು ಹೇಳಬಹುದು.

### ಬಿಡಿಸಿದ ಅಭ್ಯಸನಗಳು

ಅ. (೧) "ನಾನು ಹಗಲೆಲ್ಲ ಎರಡನೆಯವರ ಸಲುವಾಗಿ ದುಡಿಯುತ್ತೇನೆ. ಆದರೆ ನನ್ನ ಸಲುವಾಗಿ ಯಾರೂ ದುಡಿಯುವದಿಲ್ಲ. ದೇವರೆ ನಿನ್ನ ಮನೆಯಲ್ಲಿ ಇದೇ ನ್ಯಾಯವೇ" ಎಂದು ಕೂಲಿಯಾಕೆಯು ನುಡಿದಳು.

(೨) ಆಕೆಯ ಗುರುತಿನ ಒಬ್ಬ ಒಕ್ಕಲಿಗನು ಬಂದು ಕೂಲಿ "ನೀನು ಕಾಣುವ ಈ ಎಲ್ಲ ಪದಾರ್ಥಗಳನ್ನು ನೀನೇ ಮಾಡಿಕೊಂಡಿಲ್ಲ. ನಿನ್ನ ಸಲುವಾಗಿ ಎರಡನೆಯವರು ದುಡಿದಿದ್ದಾರೆ" ಎಂದು ಅನೇಕ ಉದಾಹರಣೆಗಳನ್ನು ಕೊಟ್ಟು ಮನಗಾಣಿಸಿಕೊಟ್ಟದ್ದರಿಂದ, ತಾನು ಸಿಟ್ಟು ಸಿರು ಬಿಟ್ಟದ್ದು ತಪ್ಪೆಂಬದು ಆ ಕೂಲಿಯಾಕೆಗೆ ತಿಳಿಯಿತು.

---

## ೭. ಸರೋಜಿನಿ ನಾಯುಡು

ಜಗತ್+ಪ್ರಸಿದ್ಧ — ಜಗತ್ತಿಗೆ ಹೆಸರಾದ
ಕವಯಿತ್ರಿ - ಕಾವ್ಯ ರಚಿಸುವವಳು
ಕವಿತ್ವಶಕ್ತಿ — ಕವಿತೆ ಮಾಡುವ ಸಾಮರ್ಥ್ಯ
ಬೆರಗುಗೊಳಿಸು - ಆಶ್ಚರ್ಯಗೊಳಿಸು
ದಂಪತಿ — ಗಂಡಹೆಂಡಿರ ಜೋಡು
ಭೌತಿಕ — ಭೂತಗಳಿಗೆ ಸಂಬಂಧಿಸಿದ್ದು (ಭೂಮಿ, ನೀರು, ಬೆಳಕು, ಗಾಳಿ, ಆಕಾಶ ಇವೈದು ಭೂತಗಳು)
ಪದವಿ — ಬಿರುದು
ಪದಾರ್ಥ ವಿಜ್ಞಾನ — ಪದಾರ್ಥಗಳ ಪೂರ್ಣ ತಿಳುವಳಿಕೆ

ರಸಾಯನಶಾಸ್ತ್ರ – ಪದಾರ್ಥಗಳು ಕರಗಿ, ಬೆರೆತು ಹೊಸಪದಾರ್ಥವಾಗು
(ಕಡಿದು+ಅಪ್ಪಣೆ) ಕಟ್ಟಪ್ಪಣೆ – ಕಠಿಣ ಆಜ್ಞೆ ವದರ ಜ್ಞಾನ
ಸಾಹಿತ್ಯ – ಯಾವದೊಂದು ಭಾಷೆಯಲ್ಲಿ ಬೇರೆಬೇರೆ ವಿಷಯಗಳ ಮೇಲೆ
ಕವನ – ಕಟ್ಟಿದ ಹಾಡು (ಕವಿತೆ) ಬರೆದ ಸಂಗ್ರಹ
(ಅ+ನಾಥ) ಅನಾಥ – ಒಡೆಯನಿಲ್ಲ ಪ್ರಭುತ್ವ – ಒಡೆತನ
ದವ, ದಿಕ್ಕಿಲ್ಲದವ ಆಂಗ್ಲ ಸಾಹಿತ್ಯ – ಇಂಗ್ಲೀಷ ಸಾಹಿತ್ಯ
(ನಿರ್+ಆಶ್ರಿತ) ನಿರಾಶ್ರಿತ – ಆಶ್ರಯ ನಿವಾರಣೆ – ಪರಿಹಾರ
ವಿಲ್ಲದವ, ಗತಿಯಿಲ್ಲದವ ಮುಕ್ತಮಾಡು – ಬಿಡುಗಡೆ ಮಾಡು
ಭಾಗ್ಯದೇವತೆ – ಸಂಪತ್ತಿನ ದೇವತೆ, ಸುವರ್ಣ – ಬಂಗಾರ
ಬದುಕಿಸಿದ ದೇವತೆ ಅಗ್ರಗಣ್ಯ – ಶ್ರೇಷ್ಠ
ಲೇಖಕ – ಬರೆಹಗಾರ

ಕವಿ ಇದರ ಸ್ತ್ರೀಲಿಂಗ ರೂಪ ಕವಯಿತ್ರಿ.
ಅಧ್ಯಕ್ಷ ಇದರ ಸ್ತ್ರೀಲಿಂಗ ರೂಪ ಅಧ್ಯಕ್ಷಿಣಿ.

**ಪಾಠದ ಸಾರ**— ಬಂಗಾಲದ ಬ್ರಹ್ಮನಗರ ಎಂಬ ಹಳ್ಳಿಯಲ್ಲಿ ಸುಶಿಕ್ಷಿತ ದಂಪತಿಗಳ ಹೊಟ್ಟೆಯಲ್ಲಿ 'ಸರೋಜಿನಿ ನಾಯಡು' ಹುಟ್ಟಿದಳು. ಈಕೆಯ ಕವಿತ್ವ ಶಕ್ತಿಯು ಚಿಕ್ಕಂದಿನಲ್ಲಿಯೇ ಪ್ರಕಟವಾಯಿತು. ಆಂಗ್ಲ (ಇಂಗ್ಲಿಷ) ಭಾಷೆಯಲ್ಲಿ ಈಕೆಯ ಕವನಗಳು ಮಹತ್ವದ ಸ್ಥಾನ ಪಡೆದಿವೆ. ಇವಳು ಅನೇಕ ಕಾವ್ಯ-ನಾಟಕ-ಕಾದಂಬರಿಗಳನ್ನು ಬರೆದು ಪ್ರಸಿದ್ಧಳಾಗಿದ್ದಾಳೆ. ಈಕೆಗೆ "ಭಾರತದ ಕೋಕಿಲೆ" ಎಂಬ ಹೆಸರು ಪ್ರಸಿದ್ಧವಾಗಿದೆ.

ಕೋಮಲ ಹೃದಯದ ಸರೋಜಿನಿಯು ಮೂಸೀನದಿಯ ಮಹಾಪೂರದ ಅನರ್ಥಕಾಲಕ್ಕೆ ಬಡವರಿಗೂ, ಅನಾಥರಿಗೂ, ದುಃಖಿತರಿಗೂ, ನಿರಾಶ್ರಿತರಿಗೂ ನಾನಾ ಬಗೆಯಿಂದ ಸಹಾಯಮಾಡಿ ನಿರಾಶ್ರಿತರಿಂದ "ಭಾಗ್ಯದೇವತೆ" ಎಂದು ಹೆಸರು ಪಡೆದಳು. ಗಾಂಧೀಜಿಯವರ ಆಂದೋಲನದಲ್ಲಿ ಸ್ವೇಚ್ಛೆಯಾಗಿ ಧುಮುಕಿ ಸೆರೆಮನೆವಾಸವನ್ನು ಅನುಭವಿಸಿ ರಾಷ್ಟ್ರಭಕ್ತಳೆಂದು ಹೆಸರು ಪಡೆದಳು. ಇಂತು ಕವಿತ್ವ ಶಕ್ತಿಯಿಂದಲೂ ರಾಷ್ಟ್ರಪ್ರೇಮದಿಂದಲೂ ಸರೋಜಿನಿದೇವಿಯು ಅಮರಳಾಗಿದ್ದಾಳೆ.

## ಬಿಡಿಸಿದ ಅಭ್ಯಸನಗಳು

೧. ಅಘೋರನಾಥರು ಮಗಳಾದ ಸರೋಜಿನಿಗೆ ವಿಜ್ಞಾನ, ಗಣಿತಗಳ ಅಭ್ಯಾಸವನ್ನು ಚೆನ್ನಾಗಿ ಮಾಡಿಸಬೇಕೆಂಬ ಅಪೇಕ್ಷೆಯುಳ್ಳವರಾಗಿದ್ದರು.

೨. ಹನ್ನೊಂದು ವರ್ಷದ ಸರೋಜಿನಿಗೆ ಅಂಕಗಣಿತದ ಒಂದು ಲೆಕ್ಕ ಬಿಡಿಸಲು ಕೊಡಿಸಿದರೆ ಒಂದು ಕವಿತೆಯನ್ನೇ ಬರೆದು ಮುಗಿಸಿದಳು. ಹದಿಮೂರು ವರ್ಷದ ಇವಳು ಕೇವಲ ಆರು ದಿನಗಳಲ್ಲಿ ಹದಿಮೂರು ನೂರು ಸಾಲುಗಳ ಒಂದು ಕವಿತೆಯನ್ನು ಮುಗಿಸಿದಳು. ಇದರಿಂದ ಚಿಕ್ಕವಳಿರುವಾಗಲೇ ಇವಳಿಗೆ ಕವಿತ್ವ ಶಕ್ತಿ ಇತ್ತೆಂದೆ ತಿಳಿಯುವದು.

೩. ಸರೋಜಿನಿಗೆ ಆಂಗ್ಲ ಸಾಹಿತ್ಯದಲ್ಲಿ ಪ್ರಭುತ್ವವಿತ್ತು.

೪. ಮುಸೀನದಿಯ ಮಹಾಪೂರದಲ್ಲಿ ಆದ ಅನರ್ಥದ ಕಾಲಕ್ಕೆ ನಿರಾಶ್ರಿತರ ಕಷ್ಟ ನಿವಾರಣೆಗೆ ಹಗಲಿರುಳು ದುಡಿದು, ಧನಧಾನ್ಯಗಳನ್ನೂ, ವಸತಿಗಳನ್ನೂ ಒದಗಿಸಿಕೊಟ್ಟು ಅವರನ್ನು ಸಂಕಟದಿಂದ ಮುಕ್ತ ಮಾಡಿದ್ದರಿಂದ 'ದೀನ ಜನರ ಬಂಧು' ಎಂಬ ಹೆಸರುಂಟಾಯಿತು.

೫. ಗಾಂಧೀಜಿಯವರ ರಾಷ್ಟ್ರೀಯ ಆಂದೋಲನದಲ್ಲಿ ಧುಮುಕಿ ಅನೇಕ ಸಾರೆ ಸೆರೆಮನೆಯ ವಾಸವನ್ನು ಅನುಭವಿಸಿದ್ದರಿಂದ ಸರೋಜಿನಿಯು "ರಾಷ್ಟ್ರಸೇವಿಕೆ" ಎಂದು ಹೆಸರಾದಳು.

೬. ಭಾರತದ ಉತ್ತರ ಪ್ರದೇಶದ ಸಂಯುಕ್ತ ಪ್ರಾಂತದ ಗವರ್ನರರಾಗಿ ಕೆಲಸ ಮಾಡಿದರು.

೭. ಇವರ ಕವನಗಳು ಸುಂದರವೂ, ಅರ್ಥಪೂರ್ಣವೂ ಆಗಿದ್ದು ಇಂಪಾದ ಧ್ವನಿಯಿಂದ ಹಾಡಲಿಕ್ಕೆ ಬರುವಂತಿವೆ. ಆದ್ದರಿಂದ ಇವಳಿಗೆ "ಭಾರತದ ಕೋಕಿಲೆ" ಎಂದು ಕರೆಯುವರು.

೮. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ದಪ್ಪಕ್ಷರಗಳಿಂದ ತುಂಬಿದೆ.

(ಅ) ಒಮ್ಮೆ **ಮುಸೀ** ನದಿಗೆ ಮಹಾಪೂರ ಬಂದಾಗ ಜನರ ಮನೆ ಮಠಗಳೆಲ್ಲ **ನೀರುಪಾಲಾದವು.** (ಆ) ನಿರಾಶ್ರಿತರು ಸರೋಜಿನಿಯನ್ನು ತಮ್ಮ **ಭಾಗ್ಯದೇವತೆ** ಎಂದು ಕರೆದರು. (ಇ) ಈಕೆಯ ಸೇವೆಗೆ

ಮೆಚ್ಚಿ ಸರಕಾರದವರು 'ಕೈಸರಹಿಂದ್' ಎಂಬ ಸುವರ್ಣ ಪದಕವನ್ನು ಕೊಟ್ಟರು. (ಈ) ಸರೋಜಿನಿಗೆ 'ಭಾರತದ ಕೋಗಿಲೆ' ಎಂಬ ಹೆಸರು ಪ್ರಾಪ್ತವಾಯಿತು.

೯. ಉದಾಹರಣೆಯಿಂದ ತೋರಿಸಿದಂತೆ ಕೊಟ್ಟ ಶಬ್ದಗಳನ್ನು ಹೊಂದಿಸಿ ಬರೆದರೆ.

ಉದಾ:— ಕವಿ – ಕವಯಿತ್ರಿ.

ಗೌಡ—ಗೌಡಶಾನಿ, ಗವಳಿಗ—ಗವಳಿಗಿತ್ತಿ, ಕೋಣ—ಎಮ್ಮೆ.

# ೮. ಬಣ್ಣದ ಚುಕ್ಕಿ

| | |
|---|---|
| ಸುರಿವೆನು – ಬೇಕಾದಷ್ಟು ಕೊಡುವೆನು | ಪಡುವಣ ದೆಸೆ – ಪಶ್ಚಿಮ ದಿಕ್ಕು |
| | ಹೊತ್ತು – ಸೂರ್ಯ |
| ಬೈಗು – ಸಂಜೆ | ಹೆತ್ತ – ಹಡೆದ |
| ಮುತ್ತು – ಮುದ್ದು | ತಳಿರು – ಚಿಗುರೆಲೆ |
| ಸೆಳೆ – ಜಗ್ಗು | (ತಿಳಿ+ಕೊಳ) ತಿಳಿಗೊಳ – ಸ್ವಚ್ಛವಾದ ಸರೋವರ |
| ಸೊಬಗು – ಸೌಂದರ್ಯ | |
| ನಲಿ – ಸಂತೋಷ ಪಡು | ಚುಕ್ಕಿ – ಚಿಕ್ಕಿ, ನಕ್ಷತ್ರ |

**ಸರಳಾರ್ಥ**— ಹಕ್ಕಿಯೇ, ಹಕ್ಕಿಯೇ, ಎಲೇ ಹಾರುವ ಹಕ್ಕಿಯೇ, ಬಣ್ಣದ ಚುಕ್ಕಿಯೇ ಬಾ, ಗೆಳೆಯರು ಆಡಲಿಕ್ಕೆ ಯಾರೂ ಇಲ್ಲ ಈ ಹೊತ್ತನ್ನು ಹೇಗೆ ಕಳೆಯಲಿ?

ಬಾ. ಬಾ. ನನಗೂ ಹಾಡಲಿಕ್ಕೆ (ಇಂಪಾಗಿ ಕೂಗಲಿಕ್ಕೆ) ಕಲಿಸು. ಬಾ. ಬಾ. ನನಗೂ ಹಾರಲಿಕ್ಕೆ ಕಲಿಸು, ನಿನಗೆ ಹೂವಿನ ರಸವನ್ನು ಕೊಡುವೆನು, ನಿನಗೆ ಸುಗ್ಗಿಯ ಕಾಳನ್ನು (ಬೆಳಸಿಯ ಕಾಳನ್ನು) ಸಾಕಾಗುವಷ್ಟು ಕೊಡುವೆನು.

ಬಾ ಬಾ. ಹಗಲೆಲ್ಲ ಆಡೋಣ, ಬಾ. ಬಾ. ಇಡೀ ದಿವಸ ಹಾಡೋಣ ಪಶ್ಚಿಮ ದಿಕ್ಕಿನಲ್ಲಿ ಸಂಜೆಯ ಸೂರ್ಯನು ಮುಳುಗುವ ಸಮಯಕ್ಕೆ ತಾಯಿಯು (ಕೊಡುತ್ತಿರುವ) ಮುದ್ದು (ನೆನಪಾಗಿ ಮನಸ್ಸು)

ನನ್ನನ್ನು ಮನೆಯ ಕಡೆಗೆ ಎಳೆಯುವದು.

ಅಡವಿಯ ಬಳಿಯಲ್ಲಿ ನಿನ್ನನ್ನು ಹಡೆದು, ಜೋಪಾನ ಮಾಡಿದ ಆ (ನಿನ್ನ) ತಾಯಿಯ ಗುಟುರಿನ ತುತ್ತು ನಿನ್ನನ್ನು ಗೂಡಿಗೆ ಜಗ್ಗುವದು! ಅಲ್ಲಿಯ ವರೆಗೆ ಆಡೋಣಬಾ! ಅಲ್ಲಿಯ ವರೆಗೆ ಹಾಡೋಣಬಾ!

ಹಣ್ಣನ್ನು ತಿನ್ನುತ್ತ, ತೋಟದಲ್ಲಿ ತಿರುಗುತ್ತ, ಹೂವಿನ-ಚಿಗುರೆಲೆಯ ಚೆಲುವಿಕೆಯನ್ನು ನೋಡುತ್ತ, ತಿಳಿನೀರಿನ ಸರೋವರದಲ್ಲಿ ತಣ್ಣೀರನ್ನು ಕುಡಿಯುತ್ತ, ಸಂತೋಷ ಕೊಡುವ ಹಸರು ಹುಲ್ಲಿನ ಮೇಲೆ, ಬೀಳುತ್ತ ಏಳುತ್ತ ಅಲ್ಲಿಯ ವರೆಗೂ (ಸಂಜೆಯ ವರೆಗೂ) ಆಡೋಣ ಬಾ! ಅಲ್ಲಿಯ ವರೆಗೂ ಹಾಡೋಣ ಬಾ!

**ಪಾಠದ ಸಾರ—** ಚೆಕ್ಕಂದದಿಂದ ಮುಗಿಲಲ್ಲಿ ಹಾರಾಡುತ್ತಿರುವ ಇಂಪಾದ ಸ್ವರದಿಂದ ಹಾಡುತ್ತಿರುವ ಹಕ್ಕಿಯನ್ನು ನೋಡಿ, ಅದರೊಡನೆ ಗೆಳೆತನ ಮಾಡಿ ತಾನೂ ಹಾರಾಡಲಿಕ್ಕೂ, ಇಂಪಾಗಿ ಹಾಡಲಿಕ್ಕೂ ಕಲಿತುಕೊಳ್ಳಬೇಕೆಂದು ಮನಸ್ಸು ಹರಿಯುವದು.

ತಿನ್ನಲಿಕ್ಕೆ ಹಣ್ಣು, ಹೂವಿನರಸ, ಬೆಳಸಿಯ ಕಾಳುಗಳ ಆಶೆ ತೋರಿಸಿ ತೋಟದಲ್ಲಿ ತಿರುಗುತ್ತ, ಹೂ ಚಿಗುರೆಲೆಗಳ ಚೆಲ್ವಿಕೆ ನೋಡುತ್ತ ತಿಳಿಗೊಳದ ತಣ್ಣೀರು ಕುಡಿಯುತ್ತ, ನಲಿಯುವ ಹಸರು ಹುಲ್ಲಿನ ಮೇಲೆ ಹಕ್ಕಿಗೆ ಸಂಜೆಯ ತಾಯಿಯ ಗುಟುರಿನ ತುತ್ತು, ತನಗೆ ತಾಯಿಯ ಮುತ್ತು ನೆನಪಾಗುವವರೆಗೆ ಚಕ್ಕಂದದಿಂದ ಆಡೋಣ ಎಂದು (ಕವಿಯು ಬಾಲಕನಾಗಿ) ಕರೆಯುವನು.

## ಬಿಡಿಸಿದ ಅಭ್ಯಸನಗಳು

೧. ಆಡಲಿಕ್ಕೆ ಯಾರೂ ಇಲ್ಲದ್ದರಿಂದ ಹಕ್ಕಿಯನ್ನು ಆಡಲಿಕ್ಕೂ, ಹಾಡಲಿಕ್ಕೂ ಕರೆಯುತ್ತಿರುವನು.

೨. ಹೂವಿನ ರಸವನ್ನೂ, ಸಾಕಾಗುವಷ್ಟು ಬೆಳಸಿಯ ಕಾಳುಗಳನ್ನು ಕೊಡುವೆನೆಂದು ಹೇಳುತ್ತಾನೆ.

೩. ಸಂಜೆಯವರೆಗೆ ಇಡೀ ದಿನವೆಲ್ಲ ಆಡೋಣ ಎಂದು ಹೇಳುವನು.

೪. ಹಣ್ಣನ್ನು ತಿನ್ನುತ್ತ, ತೋಟದಲ್ಲಿ ಆಡ್ಡಾಡುತ್ತ, ಹೂ-ಚಿಗುರೆಲೆಗಳ ಚೆಲ್ವಿಕೆಯನ್ನು ನೋಡುತ್ತ, ತಿಳಿನೀರಿನ ಸರೋವರದಲ್ಲಿ ತಣ್ಣೀ

ರನ್ನು ಕುಡಿಯುತ್ತ, ಸಂತೋಷ ಪಡಿಸುವ ಹಸಿರು ಹುಲ್ಲಿನ ಮೇಲೆ ಬೀಳುತ್ತ-ಏಳುತ್ತ ಆಡೋಣ ಎಂದು ಹೇಳುವನು.

೫. ಆಡುವ, ಹಾಡುವ ಹಕ್ಕಿಗಳ ಮೇಲೆ ಪ್ರೀತಿ ಇದೆಯೆಂದು ಹೊಳೆಯುವದು.

೬. ಬರಿಕಿ ಹಕ್ಕಿ, ಬಣ್ಣದ ಚುಕ್ಕಿ, ಬಾ, ಬಾ ನನಗೂ ಹಾಡಲು ಕಲಿಸು, ಹಾರಲು ಕಲಿಸು, ಎಂಬಿವು ಆ ಪ್ರೀತಿಯನ್ನು ತೋರಿಸುವ ಮಾತುಗಳು.

೭. ಬಾಲಕರಾದ ನಮಗೆ ಆಡೋಣ, ಹಾಡೋಣ ಇವು ಪ್ರೀತಿಯ ಸಂಗತಿಗಳು. ಬಣ್ಣ ಬಣ್ಣದ ಹಕ್ಕಿಯು ಆಡೋಣ, ಇಂಪಾದ ಕೂಗೋಣ ಇವೂ ಪ್ರೀತಿಯ ಸಂಗತಿಗಳೇ ಇವೆಲ್ಲ ಇರುವದರಿಂದ ನಾವು ಈ ಕವಿತೆಯನ್ನು ಮೆಚ್ಚುವೆವು

೮. ಕೊಟ್ಟ ಶಬ್ದಪ್ರಯೋಗಗಳ ಅರ್ಥವನ್ನು ಕೆಳಗೆ ಕೊಟ್ಟಿದೆ
ಪಡುವಣ ದೆಸೆ ಪಶ್ಚಿಮ ದಿಕ್ಕು, ಬೈಗಿನ ಹೊತ್ತು – ಸಂಜೆಯ ಸೂರ್ಯ ತಿಳಿಗೊಳ – ತಿಳಿನೀರಿನ ಸರೋವರ ಕಾಡಿನಬಳಿಯಲಿ – ಅಡವಿಯ ಹತ್ತರ ಪೊರೆವತಾಯಿ – ಜೋಕೆಮಾಡಿದ ತಾಯಿ ಮನೆಯೆಡೆಗೆ – ಮನೆಯ ಕಡೆಗೆ

೯. ಕೊಟ್ಟ ಪದಗಳ ಮುಂದೆ ಅವುಗಳ ವಿರುದ್ಧಾರ್ಥಕ ಪದಗಳನ್ನು ಕೊಟ್ಟಿದೆ.

ತಣ್ಣೀರು — ಬಿಸಿನೀರು, ಪಡುವಣ — ಪಶ್ಚಿಮ, ಬಾ — ಹೋಗು, ಮೇಲೆ ಹಾರು — ಕೆಳಗೆ ಇಳಿ.

# ೯. ಪ್ರತಾಪ ಸಿಂಹನ ಪ್ರತಿಜ್ಞೆ

ಮಹಾಪರಾಕ್ರಮ – ಹೆಚ್ಚಿನ ಶೌರ್ಯ; ಕಲಿ – ಶೂರ; ಹೆಣಗಿದ – ಪ್ರಯತ್ನಿಸಿದ ಹೆಜ್ಜೆಯಲ್ಲಿ ಹೆಜ್ಜೆ ಇಡು – ಅನುಸರಿಸು; ಕಲಂಕ – ಕುಂದು, ಅಪಕೀರ್ತಿ; ಹಿರಿಯಾಸೆ ಹೆಚ್ಚಿನ ಬಯಕೆ; ಹವ್ಯಾಸ – ಬಲವಾದ ಅಪೇಕ್ಷೆ, ಹಂಬಲ ರೇಗು – ಸಿಟ್ಟಿಗೇಳು; (ಮಂಡಲ + ಈಶ) ಮಾಂಡಲಿಕ – ಸಾಮಂತ, ಅಧೀನರಾಜ

ಘೋರ – ಭಯಂಕರ; ಕಾಳಗ – ಯುದ್ಧ; ಒಗ್ಗು – ಒಪ್ಪು, ಹೊಂದಿಕೆಯಾಗು
ಸ್ವಭಾವ – ಗುಣ; (ಸ್ವ+ಅಭಿಮಾನ) ಸ್ವಾಭಿಮಾನ – ತನ್ನ ಮಾನಮರ್ಯಾದೆಕಾಯ್ದು
ಪರಿವಾರ – ಸೇವಕಜನ; ಅಲೆದಾಡು – ತಿರುಗಾಡು; ತ್ಯಜಿಸು – ಬಿಡು, ಅಗಲು
ಪರಿ+ತಾಪ – ದುಃಖ, ಕಷ್ಟ+ನಷ್ಟ – ದುಃಖ ಹಾಗೂ ಹಾನಿ; ಕೊಳ್ಳುವ ಗುಣ
ತ್ರಾಣ – ಕಸುವು; ಕಷ್ಟಜೀವನ – ಕಷ್ಟದಿಂದ ಬದುಕುವಿಕೆ; ಹೃದಯ – ಅಂತಃ
ಕರಣ ಮನಸ್ಸು; ಗೋಳು – ಸಂಕಟ; ಹಲುಬು – ದುಃಖಿಸು; ಕವಿ – ತುಂಬು,
ಹೊಳೆ – ತಿಳಿ, ಎಣೆ – ಸಮಾನ; ಮಮತೆ – ಪ್ರೀತಿ; ಮಡಿ – ಸಾಯು;
ತಲೆತಗ್ಗಿಸು – ಮಣಿ, ಶರಣುಬರು, ದೃಢನಿಶ್ಚಯ – ಗಟ್ಟಿಮನಸ್ಸು
ದೃಢಸಂಕಲ್ಪ – ಸ್ಥಿರಬುದ್ಧಿ; ಪ್ರತಿಜ್ಞೆ – ಆಣೆ; ಶೌರ್ಯ – ಶೂರತನ
ಧೈರ್ಯ – ಧೀರತನ; ವಶವಾಗು – ದೊರೆ

ಈ ಪಾಠದಲ್ಲಿ ಬಂದಿರುವ "ಹೆಜ್ಜೆಯಲ್ಲಿ ಹೆಜ್ಜೆಯಿಡು" "ತಲೆತಗ್ಗಿಸು" ಎಂಬ ಶಬ್ದಸಮೂಹಗಳಿಗೆ ಸಹಜಾರ್ಥವಿರದೆ ವಿಶೇಷತರದ ಅರ್ಥವುಂಟು.

ಪಾಠದ ಸಾರ— ನಮ್ಮ ದೇಶದಲ್ಲಿ ಆಗಿ ಹೋದ ಮಹಾಪರಾಕ್ರಮಿಗಳಲ್ಲಿ ರಾಣಾಪ್ರತಾಪಸಿಂಹನು ಬಹಳ ಹೆಸರಾದವನು. ಹಿರಿಯರ ಹಾಗೆ ಮನೆತನಕ್ಕೆ ಕಲಂಕ ಬಾರದಂತೆ ಕೀರ್ತಿ ತರಬೇಕೆನ್ನುವದೇ ಈತನ ಹಿರಿಯಾಸೆ. ಮೊಗಲ ಬಾದಶಹನಾದ ಅಕಬರನು ರಾಜ್ಯ ಬೆಳಿಸುವ ಹವ್ಯಾಸದಿಂದ ಬಹುತರ ಎಲ್ಲ ರಜಪೂತ ಅರಸರನ್ನು ಗೆದ್ದು ಮಾಂಡಲಿಕರನ್ನಾಗಿ ಮಾಡಿಕೊಂಡನು. ಪ್ರತಾಪಸಿಂಹನೊಬ್ಬನು ಶರಣಾಗತನಾಗಲಿಲ್ಲ. ದಿಲ್ಲಿಯ ಬಾದಶಹನೊಡನೆ ಆದ ಯುದ್ಧದಲ್ಲಿ ಸೋತರೂ ತನ್ನ ಸ್ವಾತಂತ್ರ್ಯವನ್ನೂ, ಸ್ವಾಭಿಮಾನವನ್ನೂ ಕಳೆದುಕೊಂಡು ಶರಣಾಗತನಾಗದೆ ಹೆಂಡಿರು–ಮಕ್ಕಳೊಡನೆ ಅಡವಿ ಪಾಲಾದನು.

ಅರವಲೀ ಬೆಟ್ಟದಲ್ಲಿ ಅಲೆದಾಡುವಾಗ ಪ್ರತಾಪಸಿಂಹನಿಗೂ, ಅವನ ಹೆಂಡಿರು ಮಕ್ಕಳಿಗೂ, ಪರಿವಾರದವರಿಗೂ ಅನ್ನ ವಸ್ತ್ರಗಳಿಲ್ಲದೆ ಚಳಿಮಳೆಗಾಳಿಗಳಿಂದ ಆದ ಕಷ್ಟವನ್ನು ವರ್ಣಿಸಲಳವಲ್ಲ! ಶೌರ್ಯ-ಧೈರ್ಯ-ದೃಢನಿಶ್ಚಯದ ಪ್ರತಾಪಸಿಂಹನು ಮಕ್ಕಳ ಮೇಲಿನ ಮಮತೆಗಿಂತ ಸ್ವದೇಶಾಭಿಮಾನವೇ ಹೆಚ್ಚಿನದೆಂದು ತಿಳಿದನು. ಈತನ ದೃಢಸಂಕಲ್ಪ ತಿಳಿದ ರಜಪೂತರು ಜನಸಹಾಯವನ್ನು, ಧನಸಹಾಯವನ್ನೂ ಮಾಡಿದರು.

ಇದರಿಂದ ತನ್ನ ರಾಜ್ಯದ ಬಹುಭಾಗವನ್ನು ಗೆದ್ದನು. ಆದರೆ ರಾಜಧಾನಿಯಾದ ಚಿತ್ತೂರ ಕೋಟೆಯು ಮಾತ್ರ ವಶವಾಗಲಿಲ್ಲ. ಈ ಚಿಂತೆಯಿಂದಲೇ ಮರಣ ಹೊಂದಿದನು. ಇಂಥ ಉಜ್ವಲ ದೇಶಾಭಿಮಾನಿಯನ್ನು ನಾವೆಂದಿಗೂ ಮರೆಯುವಂತಿಲ್ಲ.

### ಬಿಡಿಸಿದ ಅಭ್ಯಾಸಗಳು

೧. ಅಕಬರನೊಡನೆ ಆದ ಯುದ್ಧದಲ್ಲಿ ಸೋತ ಪ್ರತಾಪಸಿಂಹನು ಸ್ವಾಭಿಮಾನವನ್ನು ಕಾಯ್ದುಕೊಳ್ಳಲು ಶರಣಾಗತನಾಗದೆ ಅರಮನೆ ಬಿಟ್ಟು ಅಡವಿಗೆ ಹೋದನು.

೨. ಅಕಬರನಿಗೆ ಎಂಥ ಸಮಯದಲ್ಲಿಯೂ ಶರಣಾಗತನಾಗುವದಿಲ್ಲೆಂಬ ಪ್ರತಾಪಸಿಂಹನ ದೃಢಸಂಕಲ್ಪವನ್ನು ಕೇಳಿ, ಮಂತ್ರಿಯಾದ ಭಾಮಾಶಾನು ತನ್ನಲ್ಲಿದ್ದ ದ್ರವ್ಯವನ್ನೆಲ್ಲ ಕೊಟ್ಟನು. ರಜಪೂತರು ಜನಸಹಾಯ ಮಾಡಲು ಸಿದ್ಧರಾದರು. ಹೀಗೆ ಜನಸಹಾಯವೂ, ಧನಸಹಾಯವೂ ದೊರೆತದ್ದರಿಂದ ಪ್ರತಾಪಸಿಂಹನು ತನ್ನ ರಾಜ್ಯದ ಬಹುಭಾಗವನ್ನು ಗೆದ್ದುಕೊಂಡನು.

೩. ಪ್ರತಾಪಸಿಂಹನಲ್ಲಿ ಇದ್ದ ಶೌರ್ಯ, ಧೈರ್ಯ, ದೃಢನಿಶ್ಚಯ, ಸ್ವಾಭಿಮಾನ, ಸ್ವದೇಶಾಭಿಮಾನ ಎಂಬಿವು ಅವನಲ್ಲಿ ಕಂಡು ಬರುವ ಶ್ರೇಷ್ಠ ಗುಣಗಳು.

೪. ದಪ್ಪಕ್ಷರಗಳಿಂದ ತೋರಿಸಿದ ಶಬ್ದ, ಶಬ್ದವೃಂದಗಳು ವಾಕ್ಯದಲ್ಲಿ ಉಪಯೋಗಿಸಲಿಕ್ಕೆ ಕೊಟ್ಟವುಗಳು ಇರುತ್ತವೆ.

(೧) ಪ್ರತಾಪಸಿಂಹನು ತನ್ನ ಪೂರ್ವಜರ **ಹೆಜ್ಜೆಯಲ್ಲಿ ಹೆಜ್ಜೆಯನ್ನಿಟ್ಟು** ಮನೆತನಕ್ಕೆ ಕಲಂಕ ಬಾರದಂತೆ ನಡೆದುಕೊಂಡನು. (೨) ಅಕಬರನಿಗೆ ಪ್ರತಾಪಸಿಂಹನನ್ನು ಮಾಂಡಲಿಕನನ್ನಾಗಿ ಮಾಡಿಕೊಳ್ಳುವ **ಹವ್ಯಾಸವು** ಕಡೆತನಕ ತಪ್ಪಲಿಲ್ಲ. (೩) ಮಕ್ಕಳ ಕಷ್ಟ ಜೀವನವನ್ನು ನೋಡಿ ಪ್ರತಾಪಸಿಂಹನ **ಪರಿತಾಪಕ್ಕೆ** ಎಣೆಯಿಲ್ಲದಾಯಿತು. (೪) ಪ್ರತಾಪಸಿಂಹನು ಮಕ್ಕಳ **ಮೇಲಿನ ಮಮತೆಗಿಂತ** ದೇಶಾಭಿಮಾನವೇ ಹೆಚ್ಚಿನದೆಂದು ತಿಳಿದನು.

# ೧೧. ಜಾಣ ನರಿ

ಸೃಷ್ಟಿ ಸೌಂದರ್ಯ – ಭೂಮಿಯ ಒಡವೆಗಳಲ್ಲಿ ಕಾಣುವ ಚೆಲ್ವಿಕೆ;
ಬಳಸು – ಸುತ್ತುಗಟ್ಟು; ಕಂಟಕ ಪ್ರಾಯ – ಮುಳ್ಳಿಗೆ ಸಮಾನ;
ಆರ್ತಧ್ವನಿ – ದೀನಸ್ವರ; ನಮ್ರ – ವಿನಯಪೂರ್ಣ; ವಚನ – ಪ್ರತಿಜ್ಞೆ;
ಬೆಚ್ಚು – ಹೆದರು; ಹಿಡಿತ – ಹತೋಟಿ; ವಿಶ್ವಾಸ – ನಂಬಿಗೆ;
ಧೂರ್ತ – ಮುಂದಾಲೋಚನೆಯುಳ್ಳ; ಠಕ್ಕತನ – ಮೋಸಗಾರಿಕೆ

**ಕಥೆಯ ಸಾರ**— ಸರಳ ಸ್ವಭಾವದ ಜನರು ಕ್ರೂರರೂ, ದುಷ್ಟರೂ ಆದವರ ಮರುಳು ಮಾತನ್ನು ನಂಬಿ ಅಪಾಯಕ್ಕೊಳಗಾಗುತ್ತಾರೆ. ಆದರೆ ಧೂರ್ತರೂ, ಜಾಣರೂ ಆದವರು ಸಂಕಟಗಳು ಬಂದಾಗ ಹಂಚಿಕೆಯಿಂದ ತಾವೂ ಪಾರಾಗುತ್ತಾರೆ. ಉಳಿದವರನ್ನೂ ಪಾರು ಮಾಡುತ್ತಾರೆ.

ಬಲೆಯಲ್ಲಿ ಬಿದ್ದು ನರಳುತ್ತಿದ್ದ ಹುಲಿಯು ತನ್ನ ಬಳಿಯಿಂದ ಹಾಯ್ದು ಹೋಗುತ್ತಿದ್ದ ಬ್ರಾಹ್ಮಣನನ್ನು ಕಂಡು ಬಲೆಯ ಬಾಗಿಲನ್ನು ತೆರೆಯುವಂತೆ ಕನಿಕರದ ಮಾತುಗಳನ್ನು ಆಡಿತು. ಬ್ರಾಹ್ಮಣನು ಹುಲಿಯ ಮಾತನ್ನು ನಂಬಿ ಬಾಗಿಲ ತೆರೆಯಲು ಉಪಕಾರ ಮಾಡಿದ ಆ ಬ್ರಾಹ್ಮಣನನ್ನೇ ಮುರಿದು ತಿನ್ನುವ ಹವಣಿಕೆಯಲ್ಲಿತ್ತು. ಅಷ್ಟರಲ್ಲಿ ಒಂದು ನರಿಯು ಬಂದು ನಡೆದ ಸಂಗತಿಯನ್ನೆಲ್ಲ ಕೇಳಿ ತಿಳಿದು, ಹಂಚಿಕೆಯಿಂದ ಹುಲಿಯು ತಿರುಗಿ ಬಲೆಯಲ್ಲಿ ಹೋಗುವಂತೆ ಮಾಡಿ ಆ ಬ್ರಾಹ್ಮಣನನ್ನು ಉಳಿಸಿತು.

### ಬಿಡಿಸಿದ ಅಭ್ಯಸನಗಳು

೩. "ಮನುಷ್ಯನನ್ನು ನಾನು ಕೊಂದಿಲ್ಲ. ಮುಂದೆಯೂ ಕೊಲ್ಲುವದಿಲ್ಲ. ಇದು ನನ್ನ ವಚನ. ದಯತೋರಿ ಬಲೆಯಿಂದ ಬಿಡುಗಡೆ ಮಾಡು" ಎಂದು ಹುಲಿಯು ದೀನತನದಿಂದ ಕೇಳಿಕೊಂಡದ್ದರಿಂದ ಹುಲಿಯ ಬಗ್ಗೆ ಬ್ರಾಹ್ಮಣನಲ್ಲಿ ನಂಬಿಗೆ ಹುಟ್ಟಿತು.

೪. ಎಲೇ ಹುಲಿಯೇ! ಆಡಿದ ಮಾತುಗಳನ್ನು ಮರೆತು ಬಿಟ್ಟೆಯಾ? ಉಪಕಾರ ಮಾಡಿದರೆ ಅಪಕಾರ ಮಾಡುವದು ಯೋಗ್ಯವೇ? ದಯಮಾಡಿ ನನ್ನನ್ನು ಬಿಟ್ಟು ಉಳಿಸು" ಎಂದು ಬ್ರಾಹ್ಮಣನು ಹುಲಿಗೆ ಬೇಡಿಕೊಂಡನು.

# ೧೧. ಬಸವೇಶ್ವರ

ಪುಣ್ಯಭೂಮಿ – ಪವಿತ್ರ ಭೂಮಿ; ಶ್ರೇಷ್ಠವ್ಯಕ್ತಿ – ಹೆಸರಾದ ಮನುಷ್ಯ;
ರಂಗ – ಕೆಲಸ ಮಾಡತಕ್ಕ ಸ್ಥಳ; ಅ+ದ್ವಿತೀಯ – ಅಸಾಧಾರಣ, ಶ್ರೇಷ್ಠ;
ನಂದಿ – ಬಸವ; ಲಿಪಿ – ಬರೆಹ; ಅಪಾರ – ಕೊನೆಯಿಲ್ಲದ;
ಸಂಪ್ರದಾಯ – ನಡತೆ; ಅಹಿಂಸೆ – ಪೀಡಿಸದಿರುವದು, ಕೊಲ್ಲದಿರುವದು;
ಮೂಲವು – ಆರಂಭದ ಸ್ಥಾನವು; ಐಕ್ಯ – ಏಕರೂಪತೆ;
ಭೇದಭಾವ – ಮೇಲುಕೀಳೆಂಬ ತಿಳುವಳಿಕೆ; ಕಾಯಕ – ದುಡಿತ;
(ಅಸ್ಪೃಶ್ಯ+ಉದ್ಧಾರ) ಅಸ್ಪೃಶ್ಯೋದ್ಧಾರ – ಹರಿಜನರ ಏಳಿಗೆ;
ಐಕ್ಯಹೊಂದು – ಮರಣಹೊಂದು; ಶತಮಾನ – ನೂರರ ಎಣಿಕೆ;
ಅಚ್ಚಳಿ – ರೂಪಗೆಡು; ಅಮರ – ಶಾಶ್ವತ, ಸ್ಥಿರ, ಮರಣವಿಲ್ಲದ;
ಬೋಧಪ್ರದ – ತಿಳುವಳಿಕೆಯನ್ನುಂಟು ಮಾಡುವ;

**ಪಾಠದ ಸಾರ—** ವಿಜಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ ಪರಮ ಶಿವಭಕ್ತರಾದ ಮಾದರಸ-ಮಾದಲಾಂಬಿಕೆಯರ ಹೊಟ್ಟೆಯಲ್ಲಿ, ನಂದಿಯ ಪ್ರಸಾದದಿಂದ ಬಸವೇಶ್ವರರು ಹುಟ್ಟಿದರು. ಇವರು ಕೂಡಲ ಸಂಗಮದ ಸಂಗಮನಾಥನ ಭಕ್ತರಾಗಿ ಪವಿತ್ರ ಆಚರಣೆಯಿಂದ ವಿದ್ಯಾಭ್ಯಾಸ ಮಾಡಿದರು. ಅಲ್ಲಿ ಅವರ ಜಾಣ್ಮೆಯೂ, ಕೀರ್ತಿಯೂ ನಾಲ್ಕೂಕಡೆಗೆ ಹಬ್ಬಿದವು.

ಬಸವೇಶ್ವರರ ಬುದ್ಧಿಗೆ ಮೆಚ್ಚಿ ಕಲ್ಯಾಣದ ಬಿಜ್ಜಳನ ಮಂತ್ರಿಯೂ, ಬಸವೇಶ್ವರರ ಸೋದರ ಮಾವನೂ ಆದ ಬಲದೇವನು ತನ್ನ ಮಗಳಾದ ಗಂಗಾಂಬಿಕೆಯನ್ನು ಇವರಿಗೆ ಕೊಟ್ಟು ಮದುವೆಮಾಡಿದನು. ಬಲದೇವನ ತರುವಾಯ ಬಸವೇಶ್ವರರೇ ಮುಖ್ಯಮಂತ್ರಿಯಾಗಿ ಅನೇಕ ಸುಧಾರಣೆ ಮಾಡಿ ರಾಜ-ಪ್ರಜರ ಪ್ರೀತಿಗೆ ಪಾತ್ರರಾದರು. ಪುರಾತನ ತಾಮ್ರಪಟವೊಂದನ್ನು ಓದಿ ಸಿಂಹಾಸನದ ಬುಡದಲ್ಲಿದ್ದ ಅಪಾರದ್ರವ್ಯವನ್ನು ತೆಗೆಯಿಸಿ ಕೊಟ್ಟರು.

ತನುಮನಧನಗಳಿಂದ ಜನತೆಯ ಉನ್ನತಿಗಾಗಿ ದುಡಿದು ಜನರಲ್ಲಿದ್ದ ಮೂಢ ಸಂಪ್ರದಾಯಗಳನ್ನು ಕಿತ್ತೊಗೆದು ಸತ್ಯ, ಅಹಿಂಸೆ, ನ್ಯಾಯವಾದ ತತ್ವಗಳನ್ನು ಬೋಧಿಸಿದರು. "ದಯವೇ ಧರ್ಮದ ಮೂಲವು" "ದೇವ

ನೊಬ್ಬನು ನಾವು ಹಲವು" "ಶುದ್ಧ ಭಕ್ತಿಯಿಂದ ಶಿವನನ್ನು ಪೂಜಿಸು ವವರು ಸಮಾನರು" "ಕಾಯಕವೇ ಕೈಲಾಸ" "ಎಲ್ಲರೂ ಭಕ್ತಿಮಾರ್ಗ ದಿಂದ ನಡೆದು ದೇವಸಾನ್ನಿಧ್ಯ ಹೊಂದಬಹುದು" ಎಂಬ ವಚನಗಳಿಂದ ಜನರಿಗೆ ಬೋಧಿಸಿ ಅವರನ್ನು ಸನ್ಮಾರ್ಗಕ್ಕೆ ಹಚ್ಚಿದರು. "ಅನುಭವ ಮಂಟಪ" ಎಂಬ ಸಂಸ್ಥೆ ಸ್ಥಾಪಿಸಿ ಶಿವಶರಣರೆಲ್ಲ ಒಕ್ಕಟ್ಟಿಗೆ ಸೇರಿ ಧಾರ್ಮಿಕ ಚರ್ಚೆಮಾಡಲಿಕ್ಕೆ ಅನುವು ಮಾಡಿಕೊಟ್ಟರು. ಅಸ್ಪೃಶ್ಯೋದ್ಧಾರ ಮಾಡಿ ಜಾತಿ-ಭೇದವನ್ನು ಅಳಿದರು. ಇವರು ಕಪ್ಪಡಿಸಂಗಮಕ್ಕೆ ಹೋಗಿ ಅಲ್ಲಿಯೇ ಐಕ್ಯರಾದರು. ಎಂಟು ಶತಮಾನ ಕಳೆದುಹೋದರೂ ಇವರ ತತ್ವಗಳು ಅಚ್ಚಳಿಯದೆ ಉಳಿದು ಅಮರವಾಗಿವೆ.

### ಬಿಡಿಸಿದ ಅಭ್ಯಾಸಗಳು

೭. ಜನರಲ್ಲಿದ್ದ ಮೂಢ ಸಂಪ್ರದಾಯಗಳನ್ನು ಕಿತ್ತೊಗೆದು ಸತ್ಯ, ಅಹಿಂಸೆ, ನ್ಯಾಯ ಈ ತತ್ವಗಳನ್ನು ಬೋಧಿಸಿದ್ದರಿಂದ ಬಸವೇಶ್ವರರು ಧಾರ್ಮಿಕ-ಮಹಾಪುರುಷರೆಂದು ಪ್ರಸಿದ್ಧಿಗೆ ಬಂದರು.

೭. ದಯವೇ ಧರ್ಮದ ಮೂಲವು. ಶುದ್ಧ ಭಕ್ತಿಯಿಂದ ಶಿವ ನನ್ನು ಪೂಜಿಸುವವರು ಸಮಾನರು. ಕಾಯಕವೇ ಕೈಲಾಸ ಎಂಬಿವು ಬಸವೇಶ್ವರರ ತತ್ವಗಳು.

೯. ಬಸವೇಶ್ವರರು ಗತಿಸಿ ಎಂಟು ಶತಮಾನಗಳಾದರೂ ಅವರ ತತ್ವಗಳು ಈಗಲೂ ಭರದಿಂದ ಪ್ರಸಾರವಾಗುತ್ತಿವೆ. ಅಚ್ಚಳಿಯದೆ ಉಳಿದವೆ. ಆದ್ದರಿಂದ ಅವರ ತತ್ವಗಳು ಅಮರವಾಗಿವೆ. ಎಂದು ಅನ್ನುತ್ತೇವೆ.

೧೦. (ಅ) ವಾಕ್ಯಗಳಲ್ಲಿ ಉಪಯೋಗಿಸಿದ ಕೊಟ್ಟ ಶಬ್ದಗಳನ್ನು ದಪ್ಪಕ್ಷರಗಳಿಂದ ತೋರಿಸಿದೆ.

ಮಾನವ ಜನಾಂಗದ ಉನ್ನತಿಗೆ ಹೆಣಗಿದ ವ್ಯಕ್ತಿಗಳಲ್ಲಿ ಬಸವೇಶ್ವರರು **ಅದ್ವಿತೀಯ** ವ್ಯಕ್ತಿಗಳಾಗಿದ್ದಾರೆ. ನಂದಿಯು ಶಿವನ **ವಾಹನವು**. ಭಾರ ತೀಯರು ಹಳೆಯ **ಸಂಪ್ರದಾಯಕ್ಕೆ** ಮೆಚ್ಚಿದವರು. ಭಕ್ತಿಮಾರ್ಗದಿಂದ ದೇವ **ಸಾನಿಧ್ಯ** ಪಡೆಯಬಹುದು. ಬಸವೇಶ್ವರರು ಅನುಭವ ಮಂಟಪ ಎಂಬ **ಸಂಸ್ಥೆಯನ್ನು** ಸ್ಥಾಪಿಸಿದರು.

(ಆ) ಕೆಳಗಿನ ವಾಕ್ಯಗಳ ಅರ್ಥವನ್ನು ನಮ್ಮ ಮಾತಿನಲ್ಲಿ ಹೇಳಿರಿ. ೧. ಪ್ರಾಣಿಗಳನ್ನು ಪೀಡಿಸದೆ ಅವುಗಳ ಮೇಲೆ ದಯತೋರಿಸುವದು ಮುಖ್ಯ ಧರ್ಮವು. ಹಿಂಸೆಯಿಂದ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ದಯವೇ ಧರ್ಮದ ಮೂಲವೆನಿಸುವದು. ೨. ಪ್ರತಿಯೊಬ್ಬರು ದುಡಿಯಬೇಕು. ದುಡಿಮೆಯಿಂದ ಮೇಲು-ಕೀಳು ಬರುವದಿಲ್ಲ. ದುಡಿ ತದ ಉಳಿತಾಯದಲ್ಲಿ ದಾನ-ಧರ್ಮಮಾಡಿ ಪುಣ್ಯ ಸಂಪಾದಿಸಬಹುದು. ಆದ್ದರಿಂದ ಕಾಯಕವೇ ಕೈಲಾಸವೆಂದು ಹೇಳಬಹುದು ೩. ದೇವರನ್ನು ಯಾವ ಹೆಸರಿನಿಂದ ಪೂಜಿಸಿದರೂ ಒಂದೇ. ಆದ್ದರಿಂದ "ದೇವನೊಬ್ಬ ನಾಮ ಹಲವು" ಎಂದು ಹೇಳುವೆವು.

---

# ೧೨. ಸ್ವಾತಂತ್ರ್ಯವೆ ಬೇಕು

### ೧ ನೇ ನುಡಿ

ತಡೆ – ಒಡ್ಡು; ಮೊರೆ – ಸಪ್ಪಳಮಾಡು; ಪ್ರಗತಿ – ಸುಧಾರಣೆ, ಉನ್ನತಿ;

**ಸರಳಾರ್ಥ—** ನಮ್ಮ ಏಳ್ಗೆಗೆ (ಉನ್ನತಿಗೆ) ಸ್ವಾತಂತ್ರವೆ ಬೇಕು! ಹರಿಯುವ ಹೆಳ್ಳಕ್ಕೆ ಒಡ್ಡನ್ನು ಹಾಕಲು, ಅದು ಸಪ್ಪಳಮಾಡುತ್ತ ಮುಂದಕ್ಕೆ ಸಾಗುವದೇ? (ಆದ್ದರಿಂದ) ಉನ್ನತಿಯಾಗಲಿಕ್ಕೆ ಸ್ವಾತಂತ್ರ್ಯವೇ ಬೇಕು.

### ೨ ನೇ ನುಡಿ

ಅಕ್ಕರೆ – ಪ್ರೀತಿ; ಹಾಡು – ಇಂಪಾದ ಕೂಗು

**ಸರಳಾರ್ಥ—** (ಕಿಲಿಕಿಲಿಸುವ) ಹಕ್ಕಿಯನ್ನು ಪಂಜರದೊಳಗೆ ಹಿಡಿ ದಿಟ್ಟರೆ ಅದು ಪ್ರೀತಿಯಿಂದ ಹಾಡುವದೇ? (ಅದರಂತೆ ನಾವು) ಹಾಡಿ ನಲಿದಾಡಲು ಸ್ವಾತಂತ್ರ್ಯವೇ ಬೇಕು. (ಪಾರತಂತ್ರ್ಯದಿಂದ ಮನುಷ್ಯನು ಸುಖಿಯಾಗಿರಲಾರನು)

### ೩ ನೇ ನುಡಿ

ನೇಸರ – ಸೂರ್ಯ; ಮುಗಿಲು – ಮೋಡ; ಓಳಿ – ಸಮೂಹ;
ಮುತ್ತು – ಸುತ್ತುಗಟ್ಟು; ಭಾಸಿಪ – ಹೊಳೆಯುವ;

**ಸರಳಾರ್ಥ—** ಸೂರ್ಯನನ್ನು ಮೋಡಗಳ ಸಮೂಹವು ಸುತ್ತು

ಗಟ್ಟಲು ಹೊಳೆಯುವ ಬೆಳಕನ್ನು ಕೊಡುತ್ತಿರುವನೇ? ಇಲ್ಲ. (ಅದರಂತೆ ಮನುಷ್ಯನು) ಬೆಳಕಿಗೆ ಬರಬೇಕಾದರೆ ಸ್ವಾತಂತ್ರ್ಯವೇ ಬೇಕು!

### ೪ ನೇ ನುಡಿ

(ಅರೆ+ಅರಳು) ಅರೆಯರಳು - ಅರ್ಧ ಅರಳು; ಬಾರಮುಗುಳು - ದೊಡ್ಡ ಮೊಗ್ಗೆ
ಸುರುಚಿರ — ಮನೋಹರವಾದ; ಪರಿಮಳ — ಸುವಾಸನೆ;

**ಸರಳಾರ್ಥ—** ಅರ್ಧ ಅರಳಿದ ದೊಡ್ಡ ಮೊಗ್ಗೆಯನ್ನು ಹೂವರಿ (ಅದು) ಮನೋಹರವಾದ ಸುವಾಸನೆಯನ್ನು ಕೊಡುವದೆ? (ಅದರಂತೆ ಕೀರ್ತಿಯ ಸುವಾಸನೆಯನ್ನು ಹಬ್ಬಿಸುವ) ಹೂವಿಗೆ ಸ್ವಾತಂತ್ರ್ಯವೇ ಬೇಕು!

### ೫ ನೇ ನುಡಿ

ಸಿಂಗ – ಸಿಂಹ; ಕೆರಳು – ಸಿಟ್ಟಾಗು

**ಸರಳಾರ್ಥ** (ಮನಬಲ್ಲಂತೆ) ತಿರುಗುವ ಸಿಂಹವನ್ನು ಸೆರೆಮನೆಯೊಳಗೆ (ಪಂಜರದೊಳಗೆ) ಇಟ್ಟರೆ (ಅದು) ಸಿಟ್ಟಾಗದೆ ಶಾಂತಿಯಿಂದ ಇರಬಹುದೇ? (ಮನುಷ್ಯನು ಸಿಂಹನಂಥ) ಶಕ್ತಿಯನ್ನು ತೋರಿಸಲಿಕ್ಕೆ ಸ್ವಾತಂತ್ರ್ಯವೇ ಬೇಕು.

### ೬ ನೇ ನುಡಿ

ಕರುಣಿಸುತ – ದಯತೋರುತ್ತ; ಪೊರೆ – ಕಾಪಾಡು

**ಸರಳಾರ್ಥ—** (ಈ ಪ್ರಕಾರ) ಸ್ವಾತಂತ್ರ್ಯದಲ್ಲಿಯೇ ಎಲ್ಲವೂ, ಇರುತ್ತಿರಲು, ದೇವರೆ ದೇಶಕ್ಕೆ ಸ್ವಾತಂತ್ರ್ಯವನ್ನೇ ದಯಪಾಲಿಸುತ್ತ ಕಾಪಾಡಬೇಕು!

**ಪಾಠದ ಸಾರ—** ಮನುಷ್ಯನ ಪ್ರಗತಿಗೆ, ಹಾಡಿನಲಿದಾಡಲಿಕ್ಕೆ, ಬೆಳಕಿಗೆ ಬರಲಿಕ್ಕೆ ಕೀರ್ತಿಯ ಸುವಾಸನೆಯನ್ನು ಹಬ್ಬಿಸಲಿಕ್ಕೆ, ಬುದ್ಧಿ, ಶಕ್ತಿ ತೋರಿಸಲಿಕ್ಕೆ ದೇಶದ ಸ್ವಾತಂತ್ರ್ಯವು ಅತ್ಯಗತ್ಯವಾದದ್ದು ಇರುತ್ತದೆ.

### ಬಿಡಿಸಿದ ಅಭ್ಯಾಸಗಳು

೧. ಮನುಷ್ಯನು ತನ್ನ ಬುದ್ಧಿ ಶಕ್ತಿಯನ್ನಾಗಲಿ, ಶಾರೀರಿಕ ಶಕ್ತಿಯನ್ನಾಗಲಿ ತೋರಿಸಲಿಕ್ಕೆ ಅವನಿಗೆ ಯಾವ ಪ್ರತಿಬಂಧಗಳೂ, ಪರಾ

ಧೀನತೆಯೂ ಇರಬಾರದು. ಅಂದರೆ ಇಂಥ ಮನುಷ್ಯನಿಂದ ಘನವಾದ ಕಾರ್ಯಗಳು ಆಗುವವು. ಆದ್ದರಿಂದ "ಶಕ್ತಿಗೆ ಸ್ವಾತಂತ್ರ್ಯವೇ ಬೇಕು."

## ೧೩. ವೀರ ಅಭಿಮನ್ಯು

ಪಕ್ಷ– ಬಣ, ಸಲಹಗಾರ – ಆಪ್ತಾಲೋಚನೆ ಹೇಳುವವ
ಬಾಯ್ತುಂಬ –ಬಹಳ, ಸಂಪೂರ್ಣ ದಳ – ದಂಡು, ಸಂಧಿ – ಸಮಯ
ಭೇದಿಸಿ – ಒಡೆದು, ಮುರಿದು ಚದುರಿಸು – ಓಡಿಸು
(ವೀರ+ಅಧಿವೀರ) ವೀರಾಧಿವೀರ – ವೀರರಲ್ಲಿ ಹೆಚ್ಚಿನ ವೀರ
(ಬೆನ್ನು+ಬಲ) ಬೆಂಬಲ – ಸಹಾಯ ವತ್ಸ – ಮಗ
ಕೌಶಲ್ಯ – ನಿಪುಣತೆ, ಜಾಣತನ ಬೊಟ್ಟುಕಚ್ಚು – ಸೋಜಿಗಗೊಳ್ಳು
ಧರ್ಮಯುದ್ಧ – ಮೋಸವಿಲ್ಲದ ಕಾಳಗ ವೀರಸ್ವರ್ಗ – ಯುದ್ಧದಲ್ಲಿ ಮಡಿದ
ಮನ್ನಣೆ– ಮಾನ್ಯತೆ, ಮರ್ಯಾದೆ ವೀರರಿಗೆ ದೊರೆಯುವ ಸ್ವರ್ಗ
ಹೆಮ್ಮೆಪಡು – ಅಭಿಮಾನ ಪಡು

ಈ ಪಾಠದಲ್ಲಿ ಬಂದ 'ಬಾಯ್ತುಂಬ', 'ಬೊಟ್ಟುಕಚ್ಚು' ಎಂಬ ಶಬ್ದಗಳಿಗೆ ಸಹಜಾರ್ಥವಿಲ್ಲ. ವಿಶೇಷಾರ್ಥವನ್ನು ಹೇಳಬೇಕು.

**ಪಾಠದ ಸಾರ—** ಕೌರವ ಪಾಂಡವರ ಯುದ್ಧದಲ್ಲಿ ಕೃಷ್ಣಾರ್ಜುನರು ವೈರಿ ಸೈನ್ಯದಲ್ಲಿ ಬಹು ದೂರ ಸಾಗಿರಲು; ಪಾಂಡವ ಸೇನೆಯ ಎದುರಿಗೆ ದ್ರೋಣಾಚಾರ್ಯರು ಚಕ್ರವ್ಯೂಹದ ಸೇನೆಯನ್ನು ತಂದರು, ಅರ್ಜುನನ ಹೊರತು ಈ ವ್ಯೂಹವನ್ನು ಭೇದಿಸುವವರು ಯಾರೂ ಇದ್ದಿಲ್ಲ. ಧರ್ಮರಾಜನು ಚಿಂತೆಗೊಳಗಾದನು. ಅಷ್ಟರಲ್ಲಿ ಹದಿನಾಲ್ಕು ವರ್ಷದ ಬಾಲಕನಾದ ಅರ್ಜುನನ ಮಗ ವೀರ ಅಭಿಮನ್ಯುವು ಬಂದು ಧರ್ಮರಾಜನನ್ನು ಒಡಂಬಡಿಸಿ, ಯುದ್ಧಕ್ಕೆ ಹೊರಟು, ಚಕ್ರವ್ಯೂಹವನ್ನು ಭೇದಿಸಿ ಅತುಲ ಪರಾಕ್ರಮದಿಂದ ಕೌರವರ ಸೇನೆಯನ್ನು ನಾಶಮಾಡಿದನು. ವೈರಿಗಳು ಕೂಡಾ ಆತನ ಯುದ್ಧಕೌಶಲ್ಯಕ್ಕೆ ಬೊಟ್ಟುಕಚ್ಚಿದರು. ಬಾಯ್ತುಂಬಾ ಹೊಗಳಿದರು. ಧರ್ಮಯುದ್ಧ ಬಿಟ್ಟು, ಅಧರ್ಮದಿಂದ ಅಭಿಮನ್ಯುವನ್ನು ನೆಲಕ್ಕೆ ಉರುಳಿಸಿದರು. ಭಾರತೀಯರಾದ ನಾವು

ಇಂದಿಗೂ ಈ ಬಾಲಕನ ವೀರತನಕ್ಕೆ ಮನ್ನಣೆ ಕೊಡುತ್ತೇವೆ. ಆತನ ಬಗ್ಗೆ ಹೆಮ್ಮೆ ಪಡುತ್ತೇವೆ. ವೀರ ಅಭಿಮನ್ಯುವಿನ ಕೀರ್ತಿ ಚಿರಕಾಲ ಉಳಿಯುವದರಲ್ಲಿ ಸಂಶಯವಿಲ್ಲ.

**ಬಿಡಿಸಿದ ಅಭ್ಯಸನಗಳು**

೫. "ಧರ್ಮಯುದ್ಧ ಮಾಡಿ ಅಭಿಮನ್ಯುವನ್ನು ಗೆಲ್ಲುವದು ಆಗದು. ಅಧರ್ಮಯುದ್ಧದ ಹೊರತು ಗತಿಯಿಲ್ಲ. ನಾವಿಬ್ಬರು (ದುರ್ಯೋಧನ, ದ್ರೋಣಾಚಾರ್ಯರು) ಕೃಪಾಚಾರ್ಯ, ಕರ್ಣ, ಶಕುನಿ, ದುಃಶಾಸನ ಈ ಏಳು ಜನರು ಕೂಡಿ, ಒಟ್ಟಾಗಿ ಎದುರಿಸಿ ಯುದ್ಧ ಮಾಡೋಣ" ಎಂದು ದುರ್ಯೋಧನ-ದ್ರೋಣಾಚಾರ್ಯರು ಆಲೋಚಿಸಿದರು.

೬. ಅತುಲ ಪರಾಕ್ರಮದಿಂದ ಯುದ್ಧ ಮಾಡುತ್ತಿರುವಾಗಲೇ ಮರಣ ಹೊಂದಿದನು. ಹೀಗೆ ಯುದ್ಧದಲ್ಲಿ ಮಡಿದವರಿಗೆ ವೀರಸ್ವರ್ಗ ದೊರೆಯುವದು. ಅದು ಅಭಿಮನ್ಯುವಿಗೂ ದೊರೆಯಿತು.

೭. ವೀರ ಅಭಿಮನ್ಯುವಿನಂತೆ ಕಾದಾಡಬಲ್ಲ ವೀರ ಬಾಲಕರು ಬೇಕು.

---

# ೧೪. ಆನೆ

ಭೀಕರ – ಭಯಂಕರ, ಕಾಟ – ಉಪದ್ರವ, ಕುತ್ತು – ಗಂಡಾಂತರ
ಮಾವುತ – ಆನೆ ನಡೆಸುವವ, ವೈಭವ – ಸಂಪತ್ತು, ಕುರುಹು – ಗುರುತು
ಉತ್ಸವ – ಸಮಾರಂಭ, ಶೃಂಗರಿಸು – ಅಲಂಕರಿಸು, ಭವ್ಯ – ದೊಡ್ಡ
ಚತುರಂಗ ಬಲ – ನಾಲ್ಕು ಪ್ರಕಾರದ ದಂಡು, ಅಪಜಯ – ಸೋಲು
ಅಂಕುಶ – ಆನೆ ತಿವಿಯುವ ಆಯುಧ

**ಪಾಠದ ಸಾರ—** ಆನೆಯು ಭವ್ಯವಾದ ಪ್ರಾಣಿ. ಅಡವಿಯಲ್ಲಿ ಹಿಂಡುಗಟ್ಟಿ ವಾಸಿಸುವದು. ಮನುಷ್ಯನು ಅದನ್ನು ಹಿಡಿದು, ತನ್ನ ಬುದ್ಧಿ-ಬಲಗಳನ್ನು ಉಪಯೋಗಿಸಿ ಅದರಿಂದ ಅನೇಕ ಕೆಲಸ ಮಾಡಿಸಿ ಕೊಳ್ಳುವನು. ಹುಲಿಗಳ ಬೇಟೆಗೂ, ಯುದ್ಧಕ್ಕೂ, ಅಡವಿಯಲ್ಲಿ ದೊಡ್ಡ ದೊಡ್ಡ ಮುಂಡಿಗೆಗಳನ್ನೂ ಎಳೆಯಿಸಲಿಕ್ಕೂ, ಅರಸರೂ, ಸ್ವಾಮಿಗಳೂ

ಅಂಬಾರಿಯನ್ನಿಟ್ಟು ಹೆತ್ತಲಿಕ್ಕೂ, ಸರ್ಕಸಿನಲ್ಲಿ ಕಸರತ್ತುಗಳನ್ನು ಮಾಡಿ ಸಲಿಕ್ಕೂ ಇನ್ನು ಅನೇಕ ಕೆಲಸಗಳಿಗೂ ಆನೆಗಳನ್ನು ಉಪಯೋಗಿಸು ತ್ತಾರೆ. ಆನೆಗೆ ಮದವೇರಿದರೆ ಅದು ಭಯಂಕರ ಕ್ರೂರವಾಗುವದು. ಆನೆಯು ಮಾವುತನ ಅಂಕುಶಕ್ಕೆ ವಶವಾಗುವದು.

**ಬಿಡಿಸಿದ ಅಭ್ಯಸನಗಳು**

೯. ಬಿಟ್ಟ ಶಬ್ದಗಳನ್ನು ದಪ್ಪಕ್ಷರಗಳಿಂದ ತುಂಬಿದೆ.

(ಅ) ಆನೆಯ ಸೊಂಡೆಯು ಬಲು **ಉದ್ದವಾದದ್ದು**; ಕಣ್ಣು ಬಲು ಸಣ್ಣವು. (ಆ) ಕೋರೆಗಳಂತೂ ಬಹಳ **ಬೆಲೆಯುಳ್ಳ** ವಸ್ತುಗಳು. (ಇ) ಕಾಡಾನೆಗಳ **ಕಾಟ**ವೆಂದರೆ **ಪ್ರವಾಸಿಕರಿಗೆ** ಭಯಂಕರ ಕುತ್ತು. (ಈ) ಆನೆ ಬದುಕಿದಾಗಿನ **ಬೆಲೆ ಸತ್ತ**ನೋಲೆಯೂ ಬರುವದಂತೆ.

೧೦. ದಪ್ಪಕ್ಷರಗಳಿಂದ **ತೋರಿಸಿದ** ಶಬ್ದಗಳನ್ನು ನಮ್ಮ ವಾಕ್ಯಗ ಳಲ್ಲಿ ಉಪಯೋಗಿಸಿದೆ.

ಮಲಯ ಪರ್ವತದ **ದಟ್ಟಡವಿ**ಯಲ್ಲಿ ಚಂದನ ಗಿಡಗಳು ಹೇರಳ ವಾಗಿವೆ. ಹುಲಿಯು ಬಲು **ಭೀಕರ** ಪ್ರಾಣಿಯು. ಲಗ್ನಮಂಟಪವನ್ನು ಚನ್ನಾಗಿ **ಶೃಂಗರಿಸಿದ್ದಾರೆ**. ಬೇಟೆಗಾರರನ್ನು ಕಂಡು ಚಿಗರೆಗಳು **ದಿಕ್ಕಾಪಾಲಾಗಿ** ಓಡಿದವು. ಈ ಊರಿಗೆ ನೀರು **ವಿಪುಲ**ವಾಗಿದೆ.

---

## ೧೫. ಆನೆಯೂ, ಮಂಗವೂ

ಚಪಲ – ಚುರುಕು, ನಿರ್ಣಯ – ತೀರ್ಪು, ಗೊತ್ತುವಳಿ, ಅಲುಗು – ಅಳ್ಳಾಡು ನಿರಾಶೆಗೊಳ್ಳು – ಆಶೆಬಿಡು, (ತುದಿ+ತುದಿ) ತುತ್ತತುದಿ — ಕೊನೆಕೊನೆಯ ತುದಿ

**ಪಾಠದ ಸಾರ—** ಒಂದು ಅಡವಿಯಲ್ಲಿ ಬಹಳ ಬಲವುಳ್ಳ ಒಂದು ಆನೆಯು ಇತ್ತು. ಅದೇ ಅಡವಿಯಲ್ಲಿ ಚಪಲವಾದ ಮಂಗವೂ ಒಂದಿತ್ತು. ಅವೆರಡರ ನಡುವೆ ಶಕ್ತಿಹೆಚ್ಚೋ, ಚಪಲತನ ಹೆಚ್ಚೋ ಎಂಬ ವಿಷಯ ದಲ್ಲಿ ವಾದ ನಡೆದು, ಅವು ತಮ್ಮ ಜಗಳದ ನಿರ್ಣಯ ಮಾಡಿಕೊಳ್ಳಲಿಕ್ಕೆ ಬುದ್ಧಿಶಾಲಿಯಾದ ನರಿಯ ಬಳಿಗೆ ಹೋದವು. ಅದು ಇವೆರಡಕ್ಕೂ ಹೊಳೆಯ ಆಚೆಯ ದಂಡೆಯ ಮೇಲಿರುವ ಗಿಡದ ತುತ್ತತುದಿಯ ಹಣ್ಣನ್ನು

ತರಹೇಳಿತು. ಆನೆಯು ತನ್ನ ಬೆನ್ನ ಮೇಲೆ ಮಂಗನನ್ನು ಕೂಡಿಸಿಕೊಂಡು ಹೊಳೆದಾಟಿ ಗಿಡದ ಬಳಿ ಬಂತು. ಹಣ್ಣು ನಿಲುಕಲಿಲ್ಲ. ಬೊಡ್ಡಿಗೆ ಸೊಂಡಿ ಸುತ್ತಿ ಜಗ್ಗಹತ್ತಿತು. ಅಲುಗಲಿಲ್ಲ. ಹಣ್ಣು ಸಿಗಲಿಲ್ಲ. ಮಂಗ ತುದಿಗೆ ಹಾರಿ ಹಣ್ಣು ತಂದಿತು. ಎರಡೂ ಕೂಡಿ ನರಿಯ ಹತ್ತರ ಬಂದು ಹಣ್ಣು ಕೊಟ್ಟವು. ಹಣ್ಣು ತಂದ ಬಗೆಯನ್ನು ಕೇಳಿ ನರಿಯು— "ಹಣ್ಣು ದೊರೆಯಲಿಕ್ಕೆ ಆನೆಯ ಶಕ್ತಿ, ಮಂಗನ ಚಪಲತನ ಇವೆರಡೂ ಬೇಕಾದವು. ಆದ್ದರಿಂದ ಒಂದು ಹೆಚ್ಚು, ಒಂದು ಕಡಿಮೆ ಅನ್ನುವದು ತಪ್ಪು" ಎಂದಿತು. ಆ ಮಾತಿಗೆ ಆನೆ ಮತ್ತು ಮಂಗ ಎರಡೂ ಒಪ್ಪಿದವು.

ಜಾಣತನದ ನಿರ್ಣಯಕ್ಕೆ ಎಲ್ಲರೂ ಒಪ್ಪಬೇಕಾಗುವದು.

**ಬಿಡಿಸಿದ ಅಭ್ಯಸನಗಳು**

೧. ಶಕ್ತಿ ಹೆಚ್ಚೋ! ಚಪಲತನ ಹೆಚ್ಚೋ? ಇವುಗಳ ನಿರ್ಣಯ ಕೇಳಲಿಕ್ಕೆ ಆನೆ-ಮಂಗ ಇವೆರಡು ನರಿಯ ಕಡೆಗೆ ಹೋದವು.

೨. ಚಪಲತನವೂ, ಶಕ್ತಿಯೂ ಇದ್ದರೆ ಎಂಥ ಕೆಲಸಗಳಾದರೂ ಕೈಗೂಡುವವು. ಇಂಥ ಜಾಣತನದ ನಿರ್ಣಯಕ್ಕೆ ಎಲ್ಲರೂ ಒಪ್ಪಬೇಕಾಗುವದು.

೩. ಆನೆ-ಮಂಗಗಳೆರಡನ್ನೂ ಸಮಾಧಾನ ಪಡಿಸಿದ ನರಿಯು ಜಾಣವೆನಿಸುವದು.

---

# ೧೭. ಹೆಣ್ಣುಮಕ್ಕಳು

ಮಾನವನು ಗಂಡು-ಹೆಣ್ಣುಗಳಲ್ಲಿ ಗಂಡು ಹೆಚ್ಚು, ಹೆಣ್ಣು ಕೀಳು ಎಂದು ಬಗೆಯುತ್ತಾನೆ. ಇದು ತಪ್ಪು, ವಿಚಾರವಂತರ ದೃಷ್ಟಿಯಿಂದ ಇಬ್ಬರೂ ಸರಿಸಮಾನರು. ಮೈಸೂರ ಆಸ್ಥಾನದಲ್ಲಿದ್ದ ಸಂಚಿಯ ಹೊನ್ನಮ್ಮ ನೆಂಬವಳು "ಹದಿಬದಿಯ ಧರ್ಮ" ಎಂಬ ಕಾವ್ಯದಲ್ಲಿ ಹೆಣ್ಣುಮಕ್ಕಳ ಮೇಲ್ಮೆಯನ್ನು ವರ್ಣಿಸಿದ ಪದ್ಯಗಳನ್ನು ಈ ಪಾಠದಲ್ಲಿ ತೆಗೆದುಕೊಂಡಿದ್ದಾರೆ.

೧ ನೇ ನುಡಿ

ಪೊರೆ – ಕಾಪಾಡು ಬೀಳುಗಳೆ – ಹೀಯಾಳಿಸು
ಗಾದಿಲ – ಹಳ್ಳಿಯವ, ತಿಳಿಗೇಡಿ, ಹೆಡ್ಡ

**ಸರಳಾರ್ಥ—** ನಮ್ಮೆಲ್ಲರ ಹಡೆದ ತಾಯಿ ಹೆಣ್ಣು ಅಲ್ಲವೇ ? ಜೋಪಾನ ಮಾಡಿದವಳೂ ಹೆಣ್ಣು ಅಲ್ಲವೇ ? ತಿಳಿಗೇಡಿಗಳಾದ ಜನರು “ಹೆಣ್ಣು ಹೆಣ್ಣು” ಎಂದು ಯಾಕೆ ಹೀಯಾಳಿಸುವರು.?

೨ ನೇ ನುಡಿ

ಕುಲಪುತ್ರ – ಸತ್ಕುಲದಲ್ಲಿ ಹುಟ್ಟಿದವ ಉದ್ಧರಿಸು – ಉದ್ಧಾರಮಾಡು,
ಏಳಿಗೆಗೊಳಿಸು ಒಳುಗುವರ – ಒಳ್ಳೆಯ ಗುಣವುಳ್ಳ ಹುಡುಗ
ಕುಲಕೋಟಿ – ಕೋಟಿಕುಲ, ಕುಲಸಮೂಹ

**ಸರಳಾರ್ಥ—** ಉತ್ತಮ ಕುಲದಲ್ಲಿ ಹುಟ್ಟಿದ ಮಗನು, ಓದಿದ್ದನ್ನು ತಿಳಿದುಕೊಂಡು (ಅದರಂತೆ) ನಡೆಯುವ ಹೊರತು (ತನ್ನ) ವಂಶವನ್ನು ಉದ್ಧಾರ ಮಾಡಲಾರನು. (ಆದರೆ) ಉತ್ತಮ ಕುಲದಲ್ಲಿ ಹುಟ್ಟಿದ ಹೆಣ್ಣು ಮಗಳನ್ನು ಒಳ್ಳೆಯ ಗುಣವುಳ್ಳವನಿಗೆ ಕೊಟ್ಟ ಮಾತ್ರಕ್ಕೆ ತನ್ನ ಕೋಟಿ ಕುಲವನ್ನು ಉದ್ಧಾರ ಮಾಡುವಳು.

೩ ನೇ ನುಡಿ

ಸುಚರಿತ್ರನು – ಒಳ್ಳೆಯ ನಡತೆಯುವನು ಸೊಗಸುವ – ಆನಂದಗೊಳಿಸುವ
ಸೊಬಗ – ಸುಂದರ, ಬಗೆ – ತಿಳಿ, ಭಾವಿಸು – ವಿಚಾರಿಸು, ಒಗೆ – ಹುಟ್ಟು

**ಸರಳಾರ್ಥ—** ಒಳ್ಳೆಯ ಗುಣದವನು ಯಾವನು ? ಒಳ್ಳೆಯ ನಡತೆಯುವನು ಯಾವನು ? ಕಣ್ಣಿಗೆ ಆನಂದಗೊಳಿಸುವ ಸುಂದರನು ಯಾವನು ? ಇವನ್ನು ತಿಳಿದು, ವಿಚಾರಮಾಡಿ, ಉತ್ತಮ ವಂಶದಲ್ಲಿ ಹುಟ್ಟಿದ ಉತ್ತಮ ಗುಣದ ವರನಿಗೆ ಪ್ರೀತಿಸಿ ಹೆಣ್ಣುಮಗಳನ್ನು (ಮದು ವೆಮಾಡಿ) ಕೊಡಬೇಕು.

೪ ನೇ ನುಡಿ

ನಂಟತನ ಬೀಗತನ ಹತ್ತುಗೆ – ಹತ್ತುಗಡಿ, ಸಂಬಂಧ, ಅಸ್ತಿತ್ವ
(ಎದೆ+ಕರಗು) ಎದೆಗರಗು – ಕರುಣ ಹುಟ್ಟು ಜೌವನ – ಪ್ರಾಯ
ರೂಪ – ಚಲ್ವಿಕೆ ನೇಹ – ಗೆಳೆತನ, ಪ್ರೀತಿ

ಕುಂದು – ಕಡಿಮೆಯಾಗು        ನಡೆವ+ಪೆಣ – ನಡೆವಣ

**ಸರಳಾರ್ಥ—** ದುಡ್ಡಿನ ಆಸೆ, ಬೀಗತನದ ಸಂಬಂಧ, ಗೆಳೆತನದ ವಿಚಾರಗಳಿಂದ ಕರುಣ ಹುಟ್ಟಿ ಗುಣ-ಕುಲ-ಚಲ್ವಿಕೆಗಳಿಂದ ಕಡಿಮೆಯಾದ ಹೆಣಕ್ಕೆ ಸಮಾನನಾದವನಿಗೆ ಹೆಣ್ಣುಮಗಳನ್ನು (ಎಂದೂ) ಕೊಡಬಾರದು.

**೫ ನೇ ನುಡಿ**

ಆವು – ನಾವು  ಅರ್ಥ – ಹಣ  ದೈನ್ಯ – ದೀನತನ  ತನುಜೆ – ಮಗಳು

**ಸರಳಾರ್ಥ—** ನಾವು ಬಡವರು, ನಮಗೆ ಹಣವು ಎಲ್ಲಿಂದ ಬರುವದು ? ಎಂದು ದೀನತನದ ಮಾತುಗಳನ್ನು ಆಡಿ, (ಕೊಡುವ ಪ್ರಸಂಗವನ್ನು) ಕಳೆಯದೆ, ತಾವು ಉಡುವದರಲ್ಲಿ ಕೊಡುವದರಲ್ಲಿ ಉಳಿಸಿ ತಮ್ಮ ಹೆಣ್ಣುಮಕ್ಕಳಿಗೆ ಉಡುವ-ತೊಡುವ ಒಡವೆಗಳನ್ನು ಕೊಡಬೇಕು.

**೬ ನೇ ನುಡಿ**

ಬರಿಸು – ಕರೆಯಿಸು (ಉಪಚಾರ+ಬೆರಸಿ)ಉಪಚಾರವೆರಸಿ – ಉಪಚಾರ ಮಾಡಿ,

ಪಾರಣೆ – ಉಪವಾಸದ ಮರುದಿವಸದ ಊಟ

ಪರ್ವ – ಹಬ್ಬ        ನೆರೆಯೂರು – ಎರಡನೇ ಊರು

ನಿಜ – ತನ್ನ        ಕಾಲವರಿತು – ಸಮಯ ತಿಳಿದು

**ಸರಳಾರ್ಥ—** ಇದ್ದ ಊರಲ್ಲಿಯೇ ಇರುವ ಮಗಳನ್ನು ಹಬ್ಬ ಹುಣ್ಣಿವೆಗಳಿಗೆ ಉಪಚಾರ ಮಾಡಿ ಕರೆಯಿಸಬೇಕು. ಬೇರೂರಲ್ಲಿ ಇರುವ ಮಗಳನ್ನು ತಕ್ಕ (ಮದುವೆ, ನಿಬ್ಬಣ, ಜಾತ್ರೆ ಮುಂತಾದ) ಸಮಯಕ್ಕೆ ಕರೆಯಿಸಬೇಕಾಗುವದು.

**ಬಿಡಿಸಿದ ಅಭ್ಯಸನಗಳು**

೧. ಈ ಪಾಠದಲ್ಲಿ ಹೆಣ್ಣುಮಗಳು ಹೆಚ್ಚೆಂದು ಹೇಳಿದೆ. ಗಂಡು ಮಗನು ಸತ್ಕುಲದಲ್ಲಿ ಹುಟ್ಟಿ, ಒಳ್ಳೆಯ ತಿಳುವಳಿಕೆಯಿಂದ ನಡೆದಾಗ ಒಂದು ಕುಲವನ್ನು ಮಾತ್ರ ಉದ್ಧರಿಸುವನು. ಆದರೆ ಹೆಣ್ಣುಮಗಳನ್ನು ಒಳ್ಳೆಯ ಗುಣದ ವರನಿಗೆ ಕೊಟ್ಟ ಮಾತ್ರಕ್ಕೆ ಕೋಟಿಕುಲವನ್ನು ಉದ್ಧರಿಸುವಳು. ಅದರಿಂದ ಹೆಣ್ಣುಮಗಳು ಹೆಚ್ಚೆಂದು ಹೇಳಬಹುದು.

೨. ಕೆಳಗೆ ಕೊಟ್ಟ ಜೋಡು ಶಬ್ದಗಳ ಅರ್ಥ ಹೇಳಿದೆ.

ಪುತ್ರ – ಮಗ,        ಪುತ್ರಿ – ಮಗಳು

ಕುಮಾರ - ಮಗ, ಕುಮಾರಿ - ಮಗಳು

ತನುಜ - ಮಗ, ತನುಜೆ - ಮಗಳು

ಇಂಥ ಬೇರೆ ಜೋಡು ಶಬ್ದಗಳನ್ನು ಕೆಳಗೆ ಕೊಟ್ಟಿದೆ.

ಹುಡುಗ – ಹುಡುಗಿ, ಬಾಲಕ – ಬಾಲಕಿ, ವತ್ಸ – ವತ್ಸೆ

---

# ೧೭. ಪ್ರಾಪ್ತಿಯ ಅರ್ಧಪಾಲು

ಪ್ರಾಪ್ತಿ – ಉತ್ಪನ್ನ, ಹುಟ್ಟುವಳಿ, ಗಳಿಕೆ ಅಮೀರ – ಸರದಾರ

ಕೈಯಾಸೆ – ಲಂಚದಾಸೆ (ಪಕ್ವ+ಅನ್ನ) ಪಕ್ವಾನ್ನ – ಸವಿಅಡಿಗೆ, ಹಬ್ಬದಡಿಗೆ

ಜಾಲಗಾರ– ಮೀನ ಹಿಡಿಯುವವ ಪ್ರಯೋಜನ – ಉಪಯೋಗ

ನಿರ್ವಾಹವಿಲ್ಲದೆ– ಉಪಾಯವಿಲ್ಲದೆ ಮರುಳ– ಹುಚ್ಚ, ತಿಳುವಳಿಕೆಯಿಲ್ಲದವ

ಕೈಯಾಸೆ ಎಂಬಲ್ಲಿ 'ಕೈ' ಶಬ್ದಕ್ಕೆ ಸಹಜಾರ್ಥವಿಲ್ಲ. ಲಂಚ ಎಂಬ ವಿಶೇಷ ಅರ್ಥ ಅದೆ.

**ಪಾಠದ ಸಾರ—** ಅಮೀರನ ಮಗನ ಮದುವೆಯ ಸಮಾರಂಭದ ಊಟಕ್ಕೆ ಮೀನ ಬೇಕಾದದ್ದನ್ನು ತಿಳಿದು, ಒಬ್ಬ ಜಾಲಗಾರನು ಸಮುದ್ರ ಉಕ್ಕೇರಿದ್ದರೂ ಹಂಚಿಕೆಯಿಂದ ದೊಡ್ಡಮೀನವನ್ನು ಹಿಡಿದು ಅಮೀರನ ಬಳಿಗೆ ಬಂದನು. ಕಾವಲುಗಾರನ ಲಂಚದಾಸೆಗೆ ಮೀನದ ಅರ್ಧಬೆಲೆ ಕೊಡಲೊಪ್ಪಿ ಒಳಗೆ ಹೋದನು. ಅಮೀರನು ಹಿಗ್ಗಿ ಬೆಲೆ ಕೇಳಲು, ಬಾರಕೋಲಿನ ನೂರು ಪೆಟ್ಟುಗಳೇ ತನ್ನ ಮೀನದ ಬೆಲೆಯೆಂದು ಐವತ್ತು ಪೆಟ್ಟುಗಳು ಆದಕೂಡಲೆ ಅವನು— "ತಡೆಯಿರಿ. ಉಳಿದ ಪೆಟ್ಟುಗಳು ನನ್ನ ಪಾಲುಗಾರನಿಗೆ ಮುಟ್ಟತಕ್ಕದ್ದು." ಎನ್ನಲು ನಡೆದ ಸಂಗತಿಯನ್ನೆಲ್ಲ ತಿಳಿದು ಅಮೀರನು ಕಾವಲುಗಾರನನ್ನು ಕರೆಯಿಸಿ, ಅವನ ಪಾಲಿನ ಬೆಲೆ ಸರಿಯಾಗಿ ಮುಟ್ಟಬೇಕೆಂದು ಒಳಿತಾಗಿ ಹೊಡಿಸಿ ಬಲೆಗಾರನಿಗೆ ತಕ್ಕಷ್ಟು ಹಣಕೊಟ್ಟು ಕಳಿಸಿದನು.

ಜಾಲಗಾರನು ಹಂಚಿಕೆಯಿಂದ ಲಂಚದಾಸೆ ಮಾಡಿದ ಕಾವಲುಗಾರನಿಗೆ ಚನ್ನಾಗಿ ಬಡಿಸಿ ಬುದ್ಧಿಗಲಿಸಿದನಲ್ಲದೆ, ತನ್ನ ಮೀನಕ್ಕೆ ತಕ್ಕ ಬೆಲೆಯನ್ನೂ ಸಂಪಾದಿಸಿದನು. ಮನುಷ್ಯನಲ್ಲಿ ಇಂಥ ಜಾಣತನವಿರಬೇಕು.

### ಬಿಡಿಸಿದ ಅಭ್ಯಸನಗಳು

೪. ಜಾಲಗಾರನು ಮೀನಕ್ಕೆ ಹಣ ಕೇಳದೆ, ಬಾರಕೋಲಿನ ಹೊಡೆತಗಳನ್ನು ಕೇಳಿದ್ದರಿಂದ ಈತನು ಹುಚ್ಚನಿರಬೇಕೆಂದು ಅಮೀರನು ತಿಳಿದನು.

---

## ೧೮. ನಾಗ ಪಂಚಮಿ

ಆಚರಿಸು - ಮಾಡು  ಉಡುಪು – ಉಟ್ಟುಕೊಳ್ಳುವ ಬಟ್ಟೆ
ವಿನೋದ – ಮನರಂಜನೆ, ಮಿಂದು - ಜಳಕಮಾಡಿ, ನಿಷ್ಠಾವಂತ – ನಂಬಿಗೆ
ಮಡಿ+ಉಡುಗೆ – ಒಗೆದ ವಸ್ತ್ರ  ಪ್ರದರ್ಶನ – ತೋರಿಸುವಿಕೆ  ಯುಳ್ಳ
ಭೂಷಣ – ಆಭರಣ  ಬೆಡಗಿನ – ಅಂದಚಂದದ
ಉತ್ಸಾಹ – ಹುರುಪು, ಉಲ್ಲಾಸ – ಆನಂದ, ತಣಿಸು – ತೃಪ್ತಿಪಡಿಸು

**ಪಾಠದ ಸಾರ—** ಹಿಂದೀಯರು ಮಾಡತಕ್ಕ ಹಬ್ಬಗಳಲ್ಲಿ ನಾಗ ಪಂಚಮಿ ಹಬ್ಬವು ಎಲ್ಲರಿಗೂ ಒಳ್ಳೆಯ ಪ್ರೀತಿಯದು. ಶ್ರಾವಣ ಶುದ್ಧ ತದಿಗಿ ರೊಟ್ಟಿಯ ಹಬ್ಬ, ಚವತಿ ಎಲ್ಲರಿಗೂ ಹಿರಿಯ ಹಬ್ಬ. ಅಂದು ನಾಗಪ್ಪನ ಪೂಜೆಮಾಡಿ ಹಾಲು ಎರೆಯುವರು. ಪಂಚಮಿಯ ದಿನವೂ ನಾಗಪೂಜೆ ಮಾಡುವರು. ಷಷ್ಠಿ ಶಿವಭಕ್ತ ಸಿರಿಯಾಳ ಸೆಟ್ಟಿಯ ಪೂಜೆ ಮಾಡುವರು. ಹೀಗೆ ನಾಲ್ಕುದಿನ ಹಬ್ಬ ನಡೆಯುವದು. ಈ ಹಬ್ಬದಲ್ಲಿ ಬಾಲ-ಬಾಲಿಕೆಯರೂ, ವಿಶೇಷವಾಗಿ ಹೆಣ್ಣುಮಕ್ಕಳೂ ಕಡಬು ತಂಬಿಟ್ಟು ತಿಂದು ಅಂದಚಂದದ ಬಟ್ಟೆ ಧರಿಸಿ ಊರತುಂಬೆಲ್ಲ ಕಟ್ಟಿದ ಜೋಕಾಲಿಗಳನ್ನು ಆಡಿ ನಕ್ಕು ನಲಿಯುವರು. ಗಂಡಸರು ಶಕ್ತಿ ಪ್ರದರ್ಶನ ಮಾಡುವರು. ಜಿದ್ದು-ಜೂಜುಗಳ ಮೇಲಾಟ ನಡಿಯುವದು. ಇಂತು ನಾಗಪಂಚಮಿ ಹಬ್ಬವು ಎಲ್ಲರ ಕಣ್ಮನಗಳನ್ನು ತಣಿಸುವ ಹಿರಿಯ ಹಬ್ಬವಾಗಿದೆ.

### ಬಿಡಿಸಿದ ಅಭ್ಯಸನಗಳು

೬. ನಾಗ ಪಂಚಮಿ ಹಬ್ಬದಲ್ಲಿ ಗಂಡಸರಿಗಿಂತ ಹೆಣ್ಣುಮಕ್ಕಳೇ ಹೆಚ್ಚಾಗಿ ಆಟ-ನೋಟ-ವಿನೋದಗಳಲ್ಲಿ ಭಾಗತೆಗೆದುಕೊಳ್ಳುವದರಿಂದ ಈ

ಹಬ್ಬವು ವಿಶೇಷವಾಗಿ ಹೆಣ್ಣುಮಕ್ಕಳ ಹಬ್ಬವಾಗಿದೆ.

೯. ಕೆಳಗಿನ ವಾಕ್ಯಗಳಲ್ಲಿ ಗೆರೆಹೊಡೆದ ಸ್ಥಳಗಳಲ್ಲಿ ದಪ್ಪಕ್ಷರಗಳಿಂದ ಯೋಗ್ಯ ಶಬ್ದಗಳನ್ನು ಹಾಕಿರಿ.

(ಅ) ನಾಗಪಂಚಮಿಯಲ್ಲಿ ಪಕ್ವಾನ್ನದ ಊಟ ಮಾಡುವೆವು. (ಆ) ನಾಗಪಂಚಮಿ ಹಬ್ಬವು ಶ್ರಾವಣ ಶುದ್ಧ ತದಿಗಿಯಿಂದ ಆರಂಭವಾಗುವದು. (ಇ) ನಾಗಪ್ಪನಿಗೆ ತಂಬಿಟ್ಟುಗಳ ನೈವೇದ್ಯವನ್ನು ಮಾಡುವರು. (ಈ) ಜೋಕಾಲಿಯ ಸರತಿಗಾಗಿ ಜನರು ಕಾಯುತ್ತ ನಿಲ್ಲುವರು. (ಉ) ಶಿವನ ಅತ್ಯಂತ ನಿಷ್ಠಾವಂತ ಭಕ್ತ ಸಿರಿಯಾಳಶೆಟ್ಟಿ. (ಊ) ನಾಗಪಂಚಮಿಯಲ್ಲಿ ಅತ್ತೆಯ ಮನೆಯ ಸೊಸೆಯಂದಿರೆಲ್ಲ ತವರು ಮನೆಗೆ ಬಂದಿರುತ್ತಾರೆ.

೧೦. ಕೆಳಗಿನ ಶಬ್ದಗಳ ಅರ್ಥವನ್ನು ಅವುಗಳ ಮುಂದೆ ಕೊಟ್ಟಿದೆ.

ನೈವೇದ್ಯ – ಎಡೆ, ನಿಷ್ಠೆ – ನಂಬಿಗೆ, ಪ್ರದರ್ಶನ – ತೋರಿಸುವಿಕೆ, ಮೇಲಾಟ – ಪಂದ್ಯ, ಬೆಡಗು – ಸೌಂದರ್ಯ, ಮುಡಿ – ಧರಿಸು, ತಣಿಸು – ತೃಪ್ತಿಗೊಳಿಸು

---

# ೧೯. ಭತ್ತದ ಬೆಳೆ

ಆಹ್ಲಾದಗೊಳಿಸು – ಆನಂದಪಡಿಸು ವೆಚ್ಚ – ಖರ್ಚು ಪಾಳಿ – ಹಾಳಿ, ತುಂಡು (ಮೇಲಿನ+ಪಾಳಿ) ಮೇಲ್ಪಾಳಿ – ಮೇಲಿನ ಹಾಳಿ (ಕೆಳಗು+ಪಾಳಿ) ಕೆಳ್ಪಾಳಿ – ಕೆಳಗಿನ ಹಾಳಿ, ಪಚನವಾಗು – ಕರಗು, ಸೌಮ್ಯ – ಒಳ್ಳೆಯ
ನಟ್ಟಿಗೆಮಾಡು – ಸಸಿಗಳನ್ನು ಕಿತ್ತಿ ಗದ್ದೆಯಲ್ಲಿ ಊರು

ಪಾಠದ ಸಾರ— ಮಳೆ ಬಹಳ ಆಗುವ ಕಸುವುಳ್ಳ ಕೆಂಪು ಭೂಮಿಯಲ್ಲಿ ಭತ್ತದ ಬೆಳೆ ಚನ್ನಾಗಿ ಬರುವದು. ನೀರು ನಿಲ್ಲುವದಕ್ಕೆ ಗದ್ದೆಯಲ್ಲಿ ಪಾವಟಿಗೆಗಳಂತೆ ತುಂಡುಗಳನ್ನು ಮಾಡಿ ಕಟ್ಟೆ ಕಟ್ಟುವರು. ಭತ್ತವನ್ನು ಕೂರಿಗೆಯಿಂದ ಬಿತ್ತುವದೂ ಉಂಟು. ಮಡಿಯಲ್ಲಿ ಸಸಿ ಮಾಡಿ ಗದ್ದೆಯಲ್ಲಿ ನೆಡುವದೂ ಉಂಟು. ಸಸಿಗಳಾದ ಎರಡು ಮೂರು ತಿಂಗಳಿಗೆ ಕಳೆತೆಗೆದು ನೀರು ಕಟ್ಟುವರು. ಮುಂದೆ ಹೊಡೆ ಬಿಟ್ಟು ಹಾಲು

### ಬಿಡಿಸಿದ ಅಭ್ಯಸನಗಳು

೪. ಜಾಲಗಾರನು ಮೀನಕ್ಕೆ ಹಣ ಕೇಳದೆ, ಬಾರಕೋಲಿನ ಹೊಡೆತಗಳನ್ನು ಕೇಳಿದ್ದರಿಂದ ಈತನು ಹುಚ್ಚನಿರಬೇಕೆಂದು ಅಮೀರನು ತಿಳಿದನು.

---

# ೧೮. ನಾಗ ಪಂಚಮಿ

ಆಚರಿಸು - ಮಾಡು ಉಡುಪು – ಉಟ್ಟುಕೊಳ್ಳುವ ಬಟ್ಟೆ

ವಿನೋದ – ಮನರಂಜನೆ, ಮಿಂದು - ಜಳಕಮಾಡಿ, ನಿಷ್ಠಾವಂತ – ನಂಬಿಗೆಯುಳ್ಳ

ಮಡಿ+ಉಡುಗೆ – ಒಗೆದ ವಸ್ತ್ರ ಪ್ರದರ್ಶನ – ತೋರಿಸುವಿಕೆ

ಭೂಷಣ – ಆಭರಣ ಬೆಡಗಿನ – ಅಂದಚಂದದ

ಉತ್ಸಾಹ – ಹುರುಪು, ಉಲ್ಲಾಸ – ಆನಂದ, ತಣಿಸು – ತೃಪ್ತಿಪಡಿಸು

**ಪಾಠದ ಸಾರ—** ಹಿಂದೀಯರು ಮಾಡತಕ್ಕ ಹಬ್ಬಗಳಲ್ಲಿ ನಾಗ ಪಂಚಮಿ ಹಬ್ಬವು ಎಲ್ಲರಿಗೂ ಒಳ್ಳೆಯ ಪ್ರೀತಿಯದು. ಶ್ರಾವಣ ಶುದ್ಧ ತದಿಗಿ ರೊಟ್ಟಿಯ ಹಬ್ಬ, ಚವತಿ ಎಲ್ಲರಿಗೂ ಹಿರಿಯ ಹಬ್ಬ. ಅಂದು ನಾಗಪ್ಪನ ಪೂಜೆಮಾಡಿ ಹಾಲು ಎರೆಯುವರು. ಪಂಚಮಿಯ ದಿನವೂ ನಾಗಪೂಜೆ ಮಾಡುವರು. ಷಷ್ಠಿ ಶಿವಭಕ್ತ ಸಿರಿಯಾಳ ಸೆಟ್ಟಿಯ ಪೂಜೆ ಮಾಡುವರು. ಹೀಗೆ ನಾಲ್ಕುದಿನ ಹಬ್ಬ ನಡೆಯುವದು. ಈ ಹಬ್ಬದಲ್ಲಿ ಬಾಲ-ಬಾಲಿಕೆಯರೂ, ವಿಶೇಷವಾಗಿ ಹೆಣ್ಣುಮಕ್ಕಳೂ ಕಡಬು ತಂಬಿಟ್ಟು ತಿಂದು ಅಂದಚಂದದ ಬಟ್ಟೆ ಧರಿಸಿ ಊರತುಂಬೆಲ್ಲ ಕಟ್ಟಿದ ಜೋಕಾಲಿಗಳನ್ನು ಆಡಿ ನಕ್ಕು ನಲಿಯುವರು. ಗಂಡಸರು ಶಕ್ತಿ ಪ್ರದರ್ಶನ ಮಾಡುವರು. ಜಿದ್ದು-ಜೂಜುಗಳ ಮೇಲಾಟ ನಡೆಯುವದು. ಇಂತು ನಾಗಪಂಚಮಿ ಹಬ್ಬವು ಎಲ್ಲರ ಕಣ್ಮನಗಳನ್ನು ತಣಿಸುವ ಹಿರಿಯ ಹಬ್ಬವಾಗಿದೆ.

### ಬಿಡಿಸಿದ ಅಭ್ಯಸನಗಳು

೬. ನಾಗ ಪಂಚಮಿ ಹಬ್ಬದಲ್ಲಿ ಗಂಡಸರಿಗಿಂತ ಹೆಣ್ಣುಮಕ್ಕಳೇ ಹೆಚ್ಚಾಗಿ ಆಟ-ನೋಟ-ವಿನೋದಗಳಲ್ಲಿ ಭಾಗತೆಗೆದುಕೊಳ್ಳುವದರಿಂದ ಈ

ಹಬ್ಬವು ವಿಶೇಷವಾಗಿ ಹೆಣ್ಣುಮಕ್ಕಳ ಹಬ್ಬವಾಗಿದೆ.

೯. ಕೆಳಗಿನ ವಾಕ್ಯಗಳಲ್ಲಿ ಗೆರೆಹೊಡೆದ ಸ್ಥಳಗಳಲ್ಲಿ ದಪ್ಪಕ್ಷರಗಳಿಂದ ಯೋಗ್ಯ ಶಬ್ದಗಳನ್ನು ಹಾಕಿರಿ.

(ಅ) ನಾಗಪಂಚಮಿಯಲ್ಲಿ ಪಕ್ವಾನ್ನದ ಊಟ ಮಾಡುವೆವು. (ಆ) ನಾಗಪಂಚಮಿ ಹಬ್ಬವು ಶ್ರಾವಣ ಶುದ್ಧ ತದಿಗಿಯಿಂದ ಆರಂಭವಾಗುವದು. (ಇ) ನಾಗಪ್ಪನಿಗೆ ತಂಬಿಟ್ಟುಗಳ ನೈವೇದ್ಯವನ್ನು ಮಾಡುವರು. (ಈ) ಜೋಕಾಲಿಯ ಸರತಿಗಾಗಿ ಜನರು ಕಾಯುತ್ತ ನಿಲ್ಲುವರು. (ಉ) ಶಿವನ ಅತ್ಯಂತ ನಿಷ್ಠಾವಂತ ಭಕ್ತ ಸಿರಿಯಾಳಸೆಟ್ಟಿ. (ಊ) ನಾಗಪಂಚಮಿಯಲ್ಲಿ ಅತ್ತೆಯ ಮನೆಯ ಸೊಸೆಯಂದಿರೆಲ್ಲ ತವರು ಮನೆಗೆ ಬಂದಿರುತ್ತಾರೆ.

೧೦. ಕೆಳಗಿನ ಶಬ್ದಗಳ ಅರ್ಥವನ್ನು ಅವುಗಳ ಮುಂದೆ ಕೊಟ್ಟಿದೆ.

ನೈವೇದ್ಯ – ಎಡೆ, ನಿಷ್ಠೆ – ನಂಬಿಗೆ, ಪ್ರದರ್ಶನ – ತೋರಿಸುವಿಕೆ,
ಮೇಲಾಟ – ಪಂದ್ಯ, ಬೆಡಗು – ಸೌಂದರ್ಯ, ಮುಡಿ – ಧರಿಸು,
ತಣಿಸು – ತೃಪ್ತಿಗೊಳಿಸು

---

# ೧೯. ಭತ್ತದ ಬೆಳೆ

ಆಹ್ಲಾದಗೊಳಿಸು – ಆನಂದಪಡಿಸು ವೆಚ್ಚ – ಖರ್ಚು ಸಾಳಿ – ಹಾಳಿ, ತುಂಡು
ಮೇಲಿನ+ಸಾಳಿ) ಮೇಲ್ಸಾಳಿ – ಮೇಲಿನ ಹಾಳಿ (ಕೆಳಗು+ಸಾಳಿ) ಕೆಳಸಾಳಿ – ಕೆಳ
ಪಚನವಾಗು – ಕರಗು, ಸೌಮ್ಯ – ಒಳ್ಳೆಯ ಗಿನ ಹಾಳಿ
ನಟ್ಟಿಗೆಮಾಡು – ಸಸಿಗಳನ್ನು ಕಿತ್ತಿ ಗದ್ದೆಯಲ್ಲಿ ಊರು

ಪಾಠದ ಸಾರ— ಮಳೆ ಬಹಳ ಆಗುವ ಕಸುವುಳ್ಳ ಕೆಂಪು ಭೂಮಿಯಲ್ಲಿ ಭತ್ತದ ಬೆಳೆ ಚನ್ನಾಗಿ ಬರುವದು. ನೀರು ನಿಲ್ಲುವದಕ್ಕೆ ಗದ್ದೆಯಲ್ಲಿ ಪಾವಟಿಗೆಗಳಂತೆ ತುಂಡುಗಳನ್ನು ಮಾಡಿ ಕಟ್ಟೆ ಕಟ್ಟುವರು. ಭತ್ತವನ್ನು ಕೂರಿಗೆಯಿಂದ ಬಿತ್ತುವದೂ ಉಂಟು. ಮಡಿಯಲ್ಲಿ ಸಸಿ ಮಾಡಿ ಗದ್ದೆಯಲ್ಲಿ ನೆಡುವದೂ ಉಂಟು. ಸಸಿಗಳಾದ ಎರಡು ಮೂರು ತಿಂಗಳಿಗೆ ಕಳೆತೆಗೆದು ನೀರು ಕಟ್ಟುವರು. ಮುಂದೆ ಹೊಡೆ ಬಿಟ್ಟು ಹಾಲು

ತುಂಬುವದು. ಕಾಳಗಳ ಭಾರದಿಂದ ತೆನೆಗಳು ಬಾಗುವವು. ಭತ್ತದ ಬೆಳೆಗೆ ಕಾಡುವಿಗಳ ಕಾಟ ಬಹಳ. ಆದ್ದರಿಂದ ಗದ್ದೆಯ ಸುತ್ತಲೂ ಮುಳ್ಳಿನಂತಿ ಬೇಲಿ ಇಲ್ಲವೆ ಕಲ್ಲಗೋಡೆಗಳನ್ನು ಹಾಕಿಕೊಳ್ಳುವದು. ಗದ್ದೆಯಲ್ಲಿ ಮಂಚಿಕೆ ಹಾಕಿ ಕುಳಿತು ಹಕ್ಕಿಗಳು ಕಾಯುವದು. ಭತ್ತ ಕೊಯ್ದು ಮೇಲೆ ರಾಶಿಮಾಡಿ ಕಣದಲ್ಲಿ ಹಾಕುವರು. ಭತ್ತ ಕುಟ್ಟಿದರೆ ಅಕ್ಕಿಯಾಗುವದು. ಅಕ್ಕಿಯು ಜನರ ಬಹಳ ಮುಖ್ಯ ಆಹಾರ ಧಾನ್ಯವು.

### ಬಿಡಿಸಿದ ಅಭ್ಯಾಸನಗಳು

೧. ಬೈಲು ಸೀಮೆಯಲ್ಲಿ ಭತ್ತದ ಬೆಳೆಗೆ ಬೇಕಾಗುವ ಮಳೆಯ ನೀರಿನ ಪೂರೈಕೆಯಾಗುವದಿಲ್ಲ. ಆದ್ದರಿಂದ ಅಲ್ಲಿ ಭತ್ತ ಬೆಳೆಯುವದಿಲ್ಲ.

೨. ಗದ್ದೆಯಲ್ಲಿ ಪಾವಟಿಗೆಗಳಂತೆ ತುಂಡುಗಳನ್ನು ಮಾಡಿ ಕಟ್ಟೆಗಳನ್ನು ಕಟ್ಟುವದರಿಂದ ನೀರು ನಿಲ್ಲುವದು.

೩. ಕೊಂಕಣದಲ್ಲಿ ಹೊಲಗಳು ಮಳೆಯಿಂದ ಹಸಿಯಾದ ಬಳಿಕ ಹೊಲದ ಹಾಳಿಯು ತುಂಬ ಭತ್ತವನ್ನು ಸಮನಾಗಿ ಚಲ್ಲುವರು. ಮುಂದೆ ಎರಡು ವಾರಗಳಲ್ಲಿ ಸಸಿಯಾಗುವವು. ಅವುಗಳನ್ನು ಕಿತ್ತಿ ಗದ್ದೆಯಲ್ಲಿ ನೆಡುವರು.

೪. ಅಕ್ಕಿಯು ಸೌಮ್ಯ ಆಹಾರ. ಪಚನಕ್ಕೆ ಹಗುರು, ಊರಿ ಮಾಡಿದ ಒಂದು ತಾಸಿನಲ್ಲಿ ಅಕ್ಕಿಯ ಅನ್ನ ಪಚನವಾಗುವದು. ಬಹು ಜನರು ಅಕ್ಕಿ ಅನ್ನ ಉಣ್ಣುವರು. ಆದ್ದರಿಂದ ಅಕ್ಕಿಯು ಮುಖ್ಯ ಧಾನ್ಯಗಳಲ್ಲಿ ಒಂದು ಅನ್ನುವರು.

---

## ೨೦. ತಡಸಲು

### ೧ ನೇ ಸುಡಿ

ತಡಸಲು – ಧಬೆ, ನವೆ, ಗಡ್ಡದ ಮೇಲಿಂದ ಆಧಾರ ತಪ್ಪಿ ಕೆಳಗೆ ಬೀಳುವ
ದಿಡುಗು – ತಕತಸಲ, ಗುಡುಗು – ಗದ್ದರಿಸ, ನೀರಿನ ಪ್ರವಾಹ,

ಸಾಮಾನ್ಯಾರ್ಥ— ಅಗೋ! ಅಲ್ಲಿ ತಡಸಲು! ತಡಸಲು! (ಅಣ್ಣ

ನೋಡಿದ ನಮಗೆ) ಇಲ್ಲಿ ಎದೆ 'ದಡದಡ' ಅನ್ನುವದು. ಆ ತಡೆಸಲವು 'ಗುಡುಗುಡು' ಗದ್ದರಿಸುತ್ತದೆ. (ಅದರಿಂದ) ಗಿಡಗಳು, ಮರಗಳು, ಜನರ ಮನಸ್ಸು ನಡಗುತ್ತಿರುವದು.

೨ ನೇ ನುಡಿ

ತುಂತುರ – ನೀರಿನ ಸಣ್ಣ ಕಣ, ಅಂಚು – ದಂಡೆ, ಮಳೆ – ಸಮೂಹ

ಸರಳಾರ್ಥ — ಗುಡುಗೇ ಇಲ್ಲಿ ನೀರಾಗಿರುವದು. ಮಳೆಯಲ್ಲಿ (ಕೆಳಗೆ ಬೀಳುತ್ತಿರುವ ನೀರಿನಲ್ಲಿ) ಮೋಡಗಳು ಹುಟ್ಟುತ್ತಿರುತ್ತವೆ. ನದಿಯ ಅಂಚಿಗೆ ತುಂತುರ ಹನಿಗಳ ಸಮೂಹವು (ಎತ್ತೆತ್ತ) ಇರುವದು. ನೀರೆಲ್ಲ 'ಮಿರಿಮಿರಿ' ಮಿಂಚುತ್ತಿರುವದು.

೩ ನೇ ನುಡಿ

(ಗಾಜು+ಕಂಬ) ಗಾಜುಗಂಬ - ಕಾಜಿನ ಕಂಬ

(ಮಣಿದು+ಆತು) ಮಣಿದಾತು – ಹೊಯ್ದಾಡು

ಸರಳಾರ್ಥ— ಮುತ್ತಿನಂಥ ನೀರಿನ ಹನಿಗಳು ಸಾಲುಗಟ್ಟಿ (ಮುತ್ತಿನ ಸರಗಳಂತೆ ಕಂಡು) ಹರಿದು ಬೀಳುತ್ತವೆ. (ಬೀಳುತ್ತಿರುವ ನೀರಿನ ಪ್ರವಾಹವು) ಕಾಜಿನ ಕಂಬಗಳಂತೆ ಕಂಡು ಅವು (ಕೆಳಗೆ) ಜಾರಿಯಾಗುತ್ತಿರುವವು. (ತುಂತುರ ಹನಿಗಳಲ್ಲಿ ಮೂಡಿರುವ) ಕಾಮನ ಬಿಲ್ಲುಗಳು (ಅತ್ತಿತ್ತ) ಹೊಯ್ದಾಡುತ್ತಿರುವವು. (ಚಲ್ಲವರಿದು ಬೀಳುವ) ನೀರಿನ ಹನಿಗಳು ಹೂಗಳಂತೆ ಕಂಡು ಕುಣಿದಾಡಿದಂತೆ ಕಾಣುತ್ತಿರುವದು.

೪ ನೇ ನುಡಿ

ಬೆಡಗು – ಸೌಂದರ್ಯ ರಮ್ಯ – ಮನೋಹರ

ಭಯಂಕರ – ಭಯ ಹುಟ್ಟಿಸುವ ಅದ್ಭುತ – ಸೋಜಿಗ

ಸರಳಾರ್ಥ— ಈ ದಿಡುಗು ಭೂಮಿ ಆಕಾಶಗಳ ನಡುವಿನ ಸುಂದರವೂ, ಮನೋಹರವೂ, ಭಯಂಕರವೂ ಆದ ನೋಟವುಳ್ಳದ್ದು ! ಸೋಜಿಗ ಗೊಳಿಸುವದು. ಬಾ ಇಲ್ಲಿ, ಆದರೆ ಅಂಜಿಕೆಯು ಗದ್ದರಿಸುವದು. (ಹೆದರಿಸುತ್ತಿರುವದು) ಅಲ್ಲಿಯೇ ನಿಲ್ಲು.

೫ ನೇ ನುಡಿ

ಧುಮುಕು – ಮುಂದೆ ನುಗ್ಗು, ಸ್ತಂಭಿತ – ಕಂಬದಂತೆ ನಿಂತ, ಮಿಸುಕಾಡದೆ

ಅಂಟು – ಹತ್ತಿಕೊಳ್ಳು ಊಹೆ – ತರ್ಕ, ಕಲ್ಪನೆ ಇಷ್ಟ

(ದಿಕ್+ಅಂತ) ದಿಗಂತ – ದಿಕ್ಕುಗಳ ಕೊನೆ, ಕ್ಷಿತಿಜ, ಆಕಾಶ
ಹೊಂಟಿತ್ತು – ಹೋಗುತ್ತಿತ್ತು

ಸರಳಾರ್ಥ— (ತಡಸಲನ್ನು ನೋಡಲಿಕ್ಕೆ) ಮನಸ್ಸು ನದಿಯಂತೆ ಧುಮುಕುತ್ತಿರುವದು. ಆದರೆ ದೇಹವು ತಡಸಲಿನ ಹಾಗೆ ನಿಂತಿರುವದು. (ಮುಂದಕ್ಕೆ ಸಾಗದೆ ಇರುವದು.) ಕಾಲು ನಿಂತಲ್ಲಿಯೇ ಅಂಟಿಕೊಂಡಿರುವದು. (ಆದರೆ ಮನಸಿನ) ಕಲ್ಪನೆಗಳು ಆಕಾಶಕ್ಕೆ (ಬಹು ದೂರದ ವರೆಗೆ) ಹೋಗುತ್ತಿರುವದು.

ವಿ ವಿ— ಕವಿಯು ಈ ಪಾಠದಲ್ಲಿ ತಡಸಲಿನ ಸೊಬಗನ್ನು ಬಲು ಮನೋಹರವಾಗಿ ವರ್ಣಿಸಿದ್ದಾನೆ. ಗುಡುಗೇ ನೀರಾಗಿಹುದು. ತುಂತುರ ಮಳೆ ಹೊಳೆಯಂಚಿಗಿದೆ, ಮುತ್ತಿನ ಸರಗಳು ಹರಿಯುತಿವೆ, ಗಾಜುಗಂಬಗಳು ಸುರಿಯುತಿವೆ, ಕಾಮನ ಬಿಲ್ ಮಣಿದಾಡುತಿವೆ, ನೀರಿನ ಹೂ ಕುಣಿದಾಡುತಿವೆ, ಇವೇ ಮುಂತಾದ ಮಾತುಗಳಲ್ಲಿ ಕವಿಯು ತೋರಿಸಿದ ಸೊಬಗಿನ ಸುಗ್ಗಿಯುಂಟು. ಕವಿಯು ಹೇಳುವಂತೆ ಈ ಹಾಡನ್ನು ಅನ್ನುವಾಗ ಮನಸ್ಸು ಮುನ್ನುಗ್ಗಿ ಊಹೆಯು ದಿಗಂತಕ್ಕೆ ಹೊರಡುವವರಲ್ಲಿ ಸಂಶಯವಿಲ್ಲ.

## ಬಿಡಿಸಿದ ಅಧ್ಯಯನಗಳು

೧. ತಡಸಲಿನ ಸಪ್ಪಳ ಕೇಳಿ ಎಂದ ನಡಗುವದು.

೨. ಎತ್ತರದಿಂದ ಧುಮುಕುವ ನೀರು ಗಾಜಿನಗಂಬಗಳು ಸುರಿಯುವಂತೆ ಕಾಣುತ್ತದೆ.

೩. ಸಿಡಿಯುವ ತುಂತುರ ಹನಿಗಳಲ್ಲಿ ಸೂರ್ಯ ಪ್ರಕಾಶವು ಬಿದ್ದಾಗ ಕಾಮನ ಬಿಲ್ಲುಗಳು ಕಾಣುವವು.

೪. ತಡಸಲಿನ ಸೌಂದರ್ಯವು ಮನಸ್ಸನ್ನು ಸೋಜಿಗಗೊಳಿಸುತ್ತಿದ್ದರೂ, ಅದರ ಅಬ್ಬರದ ಸಪ್ಪಳವು ಭಯವನ್ನು ಉಂಟು ಮಾಡುತ್ತದೆ.

೫. ನೀರಿನ ಹನಿಗಳ ಸಮೂಹವು ಮುತ್ತಿನ ಸರದಂತೆಯೂ, ಕೆಳಗೆ ಬೀಳುವ ನೀರು ಗಾಜಿನ ಕಂಬದಂತೆಯೂ, ಪುಟಿದು ಬೀಳುವ ನೀರಿನ ಹನಿಗಳು ಹೂವಿನಂತೆಯೂ ಕಾಣುವದರಿಂದ ತಡಸಲಿನ ಬೆಡಗೂ ರಮ್ಯತೆಯೂ ಕಂಡುಬರುವದು. ತಡಸಲಿನ ಗರ್ಜನೆಗೆ ಗುಡುಮರ್ರುಳೂ

ಜನಮನವೂ ನಡುಗುವದೆಂದು ಹೇಳಿದ್ದರಿಂದ ಅದು ಭಯಂಕರವಾಗಿ ಕಾಣುತ್ತಿತ್ತೆಂದೂ ತಿಳಿಯುವದು.

೮. (೨ನೆಯ, ೩ನೆಯ ನುಡಿಗಳ ಸರಳಾರ್ಥ ಓದಿ, ಕೊಟ್ಟ ಸಾಲುಗಳ ಅರ್ಥ ಹೇಳಿರಿ.)

---

# ೨೧. ಗೆರಸಪ್ಪೆಯ ತಡಸಲು

ಜೋಗ – ತಡಸಲು ಅಪರೂಪ – ವಿರಳ ಒಡಲು – ಹೊಟ್ಟೆ, ನದಿಯಪಾತ್ರ
(ಪರ್ವತ+ಆವಳಿ) ಪರ್ವತಾವಳಿ – ಬೆಟ್ಟದ ಸಾಲು ನಿಬಿಡ – ದಟ್ಟ
ಗೌರ+ವನಿತಾ – ಬಿಳಿಯಬಣ್ಣದ ಪ್ರಾಯದ ಸ್ತ್ರೀ ಸಂಕುಚಿತ – ಹತ್ತಿಯಾದ
ಗರ್ಜಿಸು – ಧ್ವನಿಮಾಡು (ನಾಲಿಗೆ+ಕಲ್ಲು) ನಾಲಿಗೆಗಲ್ಲು – ಮುಂದೆ
ಸರಳು – ಪ್ರವಾಹದಬಿಸಿಲು ಪಸರಿಸು – ಹಬ್ಬು ಹಾಯ್ದ ಕಲ್ಲು
ಪ್ರೇಕ್ಷಕ – ನೋಡುವವ ಮಡುವು-ನೀರಿನ ತಗ್ಗು ಧೂಮ್ರರಾಶಿ – ಹೊಗೆಯ
ಏಕಪ್ರಕಾರ – ಒಂದೇಸವನೆ ಇಂದ್ರಧನುಸ್ಸು – ಕಾಮನಬಿಲ್ಲು, ರಾಶಿ
ಸಾಗರಬಿದ್ದು – ಅಸ್ತಬಿದ್ದು ಬಿಕ್ಕಟ್ಟಿನದು – ಕಠಿಣವಾದದ್ದು
ಸೃಷ್ಟಿ ಚಮತ್ಕಾರ – ದೇವರು ಜಗತ್ತಿನಲ್ಲಿ ನಿರ್ಮಿಸಿದ ಒಡವೆಗಳಲ್ಲಿ ಕಂಡು ಬರುವ ಚಲ್ವಿಕೆಯ ನೋಟ

**ಪಾಠದ ಸಾರ—** ಶರಾವತಿ ನದಿಯು ಗೆರಸಪ್ಪೆಯ ಬಳಿಯಲ್ಲಿ ಸಹ್ಯಪರ್ವತಾವಳಿಯೊಳಗಿನ ಒಂದು ಕಡಿದಾದ ಭಾಗದ ಮೇಲಿಂದ ನಾಲ್ಕು ಸರಳುಗಳಾಗಿ ೮೩೦ ಫೂಟು ಎತ್ತರದಿಂದ ಆಧಾರತಪ್ಪಿ ಕೆಳಗೆ ಬೀಳುತ್ತದೆ. ಇದಕ್ಕೆ ಗೆರಸಪ್ಪೆಯ ತಡಸಲೆಂದೂ ಕೋಡಕಣಿಯ ಜೋಗವೆಂದೂ ಕರೆಯುವರು. ಈ ನಾಲ್ಕು ಸರಳುಗಳಿಗೆ ಕ್ರಮವಾಗಿ ರಾಜಾತಡಸಲು, ಅಬ್ಬರದ ತಡಸಲು, ಬಾಣದ ತಡಸಲು, ಗೌರವನಿತಾ ತಡಸಲು ಎಂಬ ಅನ್ವರ್ಥಕ ಹೆಸರುಗಳನ್ನು ಅವು ಕೆಳಗೆ ಬೀಳುವ ಬಗೆಯಿಂದ ಕೊಟ್ಟಿರುತ್ತಾರೆ. ತಡಸಲು ಬೀಳುವ ಸ್ಥಳದಲ್ಲಿ ೧೨೦ ಫೂಟು ಆಳವಾದ ಮಡುವು ಆಗಿದೆ. ಮಳೆಗಾಲ ತೀರಿದ ಮೇಲೆ ಡಿಸೆಂಬರ ತಿಂಗಳಲ್ಲಿ ತಡಸಲಿನ ನೋಟವು ಬಹಳ ಪ್ರೇಕ್ಷಣೀಯವಾಗಿರುತ್ತದೆ. ತಡಸಲಿನ ಗರ್ಜನೆ, ತುಷಾ

ರಗಳಿಂದೇಳುವ ಧೂಮ್ರರಾಶಿ, ಸೂರ್ಯಕಿರಣಗಳಲ್ಲಿ ಮೂಡುವ ಇಂದ್ರಧನುಸ್ಸುಗಳು ಪ್ರೇಕ್ಷಕರ ಮನಸ್ಸನ್ನು ತಣಿಸುವವು. ಇದು ಬಹು ದೊಡ್ಡ ಸೃಷ್ಟಿ ಚಮತ್ಕಾರವಾಗಿರುವದು.

**ಬಿಡಿಸಿದ ಅಭ್ಯಸನಗಳು**

೪. ಮಳೆಗಾಲ ತೀರಿದ ಮೇಲೆ ಡಿಸೆಂಬರ ತಿಂಗಳಲ್ಲಿ ಹೊಳೆಯ ಪ್ರವಾಹವು ಬಹು ದೊಡ್ಡದೂ, ತೀರ ಸಣ್ಣದೂ ಆಗಿರುವದಿಲ್ಲ. ಈ ತಡಸಲನ್ನು ಈ ಕಾಲದಲ್ಲಿ ನೋಡಲಿಕ್ಕೆ ಬಲು ಯೋಗ್ಯವಾದ ಕಾಲವು.

---

# ೨೨. ಒಳ್ಳೆಯ ಗೆಳೆಯ

(ದೇಶ+ಅಂತರ) ದೇಶಾಂತರ – ಎರಡನೆಯ ದೇಶ, ಗ್ರೀವ – ಕೊರಳು
ಚಿತ್ರಗ್ರೀವ – ಬಣ್ಣಬಣ್ಣದ ಕೊರಳು ಉಳ್ಳದ್ದು ನಾಯಕ ಹಕ್ಕಿ – ಹಕ್ಕಿಗಳ
ಸಂಘಶಕ್ತಿ – ಒಟ್ಟುಗೂಡಿದ ಶಕ್ತಿ ಒಡೆಯ, ಹಿರಿಯ ಹಕ್ಕಿ
ಬಳಲಿದ್ದ – ದಣಿದಿದ್ದ ಕಳವಳಪಡು – ಚಿಂತೆಮಾಡು ಬಿಲ – ಹೋರು
ಮರುಗು – ದುಃಖಪಡು ಹೊದರು – ಹೋಟು ಅವಸ್ಥೆ – ಗತಿ, ಪರಿಣಾಮ
ಸಂಗಡಿಗ – ಸಂಗಡ ಇರುವವ

**ಪಾಠದ ಸಾರ—** ಪಾರಿವಾಳಗಳು ಹಿರಿಯ ನಾಯಕ ಹಕ್ಕಿ ಚಿತ್ರಗ್ರೀವನ ಮಾತು ಕೇಳದೆ ಕಾಳಿನ ಆಸೆಗಾಗಿ, ಬೇಡನ ಬಲೆಯಲ್ಲಿ ಸಿಕ್ಕಿಕೊಂಡವು. ಸಂಘಶಕ್ತಿ ದೊಡ್ಡದು. ಅದರಿಂದ ಎಂಥ ದೊಡ್ಡ ಕೆಲಸಗಳಾದರೂ ಸಾಧ್ಯವಾಗುವವು. ಎಂಬ ಚಿತ್ರಗ್ರೀವನ ಮಾತನ್ನು ನಂಬಿ, ಒಮ್ಮೆಲೇ ಬಲೆಸಹಿತ ಮೇಲೆಹಾರಿ, ಚಿತ್ರಗ್ರೀವನ ಜೀವದ ಗೆಳೆಯನಾದ ಹಿರಣ್ಯಕನೆಂಬ ಅರಸು ಇಲಿಯ ಬಳಿಗೆ ಬಂದವು. ಹಿರಣ್ಯಕನು ಗೆಳೆಯನ ಅವಸ್ಥೆ ಕಂಡು ಬಲೆ ಕತ್ತರಿಸಿ ಬಿಡುಗಡೆ ಮಾಡಲು ಮುಂದೆ ಬಂದಿತು. ಮೊದಲು ಸಂಗಡಿಗರನ್ನು ಬಿಡುಗಡೆ ಮಾಡಲು ಹೇಳಿದ ಗೆಳೆಯನ ಮಾತಿಗೆ ಸಂತೋಷಪಟ್ಟು ಎಲ್ಲರ ಬಿಡುಗಡೆ ಮಾಡಿತು. ತಮ್ಮ ಒಳ್ಳೆಯ ಗೆಳೆಯನ ಉಪಕಾರ ಸ್ಮರಿಸಿ ತಮ್ಮ ಸ್ಥಳಕ್ಕೆ ಹೊರಟು ಹೋದವು.

### ಪದ್ಯ

ಇರ್ಪವ – ಇರುವವ  ಮೇಣ್ – ಮತ್ತು  ನಲವಿನ – ಆನಂದದ
ನೋವಿನ – ಸಂಕಟದ  ಒಲವು – ಪ್ರೀತಿ  ಪೇಳ್ವ – ಹೇಳುವ
ಕೇಳ್ವ – ಕೇಳುವ  ಧನ್ಯ – ಪುಣ್ಯವಂತ

**ಸರಳಾರ್ಥ**— ಗೆಳೆಯರ ಸಂಗಡ (ಪ್ರೀತಿಯಿಂದ) ಮಾತಾಡುವಂಥ ಗೆಳೆಯರಿಗೆ ಉಪಕಾರ ಮಾಡುವಂಥ, ಗೆಳೆಯರೊಡನೆ (ಯಾವಾಗಲೂ) ಇರುವಂಥ, ಮತ್ತು ಸುಖದುಃಖಗಳ ಮಾತನ್ನು ಪ್ರೀತಿಯಿಂದ ಹೇಳುವಂಥ ಕೇಳುವಂಥ ಮನುಷ್ಯನೇ ಪುಣ್ಯವಂತನು.

**ವಿ. ವಿ**— ಈ ಪಾಠದಲ್ಲಿ ಬಂದ ಬಿಲ, ಹೋದು, ಹೊದರು ಎಂಬವು ಒಂದೇ ಅರ್ಥವನ್ನು ಸೂಚಿಸುವ ಬೇರೆಬೇರೆ ಶಬ್ದಗಳಾಗಿವೆ.

### ಬಿಡಿಸಿದ ಅಭ್ಯಸನಗಳು

೨. "ಜನರಿಲ್ಲದ ಅಡವಿಯಲ್ಲಿ ಅಕ್ಕಿಯ ಕಾಳು ಹೇಗೆ ಬಂದವು. ಇದನ್ನು ವಿಚಾರ ಮಾಡಿ ಇಳಿಯಿರಿ" ಎಂದು ಚಿತ್ರಗ್ರೀವನೆಂಬ ಪಾರಿವಾಳವು ತನ್ನ ಸಂಗಡಿಗರಿಗೆ ಹೇಳಿತು. ಮತ್ತು ಬಲೆಯಲ್ಲಿ ಕಾಲು ಸಿಕ್ಕು ಪೇಚಾಡುವ ಹಕ್ಕಿಗಳಿಗೆ— "ಇದು ಗಾಬರಿಯಾಗಿ ಸುಮ್ಮನಿರುವ ಸಮಯವಲ್ಲ. ಸಂಘಶಕ್ತಿಯು ಬಲು ದೊಡ್ಡದು. ಅದಕ್ಕೆ ಎಂಥ ಕೆಲಸವಾದರೂ ಸಾಧ್ಯವಾಗುವದು. ಒಮ್ಮೆಲೆ ಶಕ್ತಿ ಒಟ್ಟಾಗುವಂತೆ ಹಾರಿರಿ" ಎಂದು ಹೇಳಿತು.

೩. ಹಿರಣ್ಯಕ ಇಲಿಯು ಗೆಳೆಯನಾದ ಚಿತ್ರಗ್ರೀವನಿಗೂ, ಅವನ ಪರಿವಾರದ ಪಾರಿವಾಳಗಳಿಗೂ ಬಂದ ಸಂಕಟವನ್ನು ತಿಳಿದು, ಕಾಲಿಗೆ ಸಿಕ್ಕುಬಿದ್ದ ಬಲೆಗಳನ್ನೆಲ್ಲ ಕಡಿದು ಬಿಡುಗಡೆ ಮಾಡಿತು. ಆದ್ದರಿಂದ ಹಿರಣ್ಯಕನೆಂಬ ಇಲಿಯು ಒಳ್ಳೆಯ ಗೆಳೆಯನೆನಿಸುವದು.

---

## ೨೩. ರೊದ್ದ ಶ್ರೀನಿವಾಸರಾಯರು

ಭವ್ಯ – ದೊಡ್ಡದೂ, ಸುಂದರವೂ ಆದದ್ದು  ಗಂಭೀರ – ನೆಲೆಯಿಲ್ಲದ್ದು
ತೀಕ್ಷ್ಣ – ಚುರುಕಾದ ಮಿರ್ಕ್ಷಿ – ವೀರ ದಿವಂಗತ – ಮರಣ ಹೊಂದಿದ

ಧೋರಣೆ – ಮುಂದಾಲೋಚನೆ ಹೆಣಗು – ಪ್ರಯತ್ನಿಸು
ಪರಿಶ್ರಮ – ದುಡಿತ ಕರ್ತವ್ಯದಕ್ಷತೆ – ಮಾಡತಕ್ಕ ಕೆಲಸದಲ್ಲಿ ಜಾಗರೂಕತೆ
ಸಾಮರ್ಥ್ಯ – ಗಟ್ಟಿಗತನ ವಾತ್ಸಲ್ಯ – ಪ್ರೀತಿ ಸ್ತುತ್ಯ – ಹೊಗಳತಕ್ಕ
ನಿವೃತ್ತರಾಗು – ಬಿಡುಗಡೆಯಾಗು ಶಾಸನ ಸಭೆ – ಕಾಯದೆ ಮಾಡುವ ಸಭೆ
ವಿಸ್ತಾರವಾಗು – ಬೆಳೆ ದಕ್ಷತೆ – ಜಾಗರೂಕತೆ
(ಸ್ವ+ಅರ್ಥ) ಸ್ವಾರ್ಥ – ಸ್ವಂತದ ಹಿತ

'ಶರಣು ಹೊಡೆ' ಎಂಬುವದಕ್ಕೆ ಸಹಜಾರ್ಥವಿಲ್ಲ. ಬಿಟ್ಟು ಬಿಡು, ಗೋಜಿಗೆ ಹೋಗದಿರು ಎಂಬ ಬೇರೆ ಅರ್ಥವುಂಟು.

**ಪಾಠದ ಸಾರ—** ಕನ್ನಡ ನಾಡಿನ ದೊಡ್ಡ ಮನುಷ್ಯರಲ್ಲಿ ರೊದ್ದ ಶ್ರೀನಿವಾಸರಾಯರು ಒಬ್ಬರು. ಇವರು ಕ್ರಿ. ಶ. ೧೮೫೦ರಲ್ಲಿ ಧಾರವಾಡ ದೊಳಗೆ ಹುಟ್ಟಿದರು. ಬಡತನದಲ್ಲಿ ಬೆಳೆದು ತಾಯಿ ಸುಬ್ಬಮ್ಮನ ಧೋರಣೆ ಪ್ರೋತ್ಸಾಹಗಳಿಂದ ಮ್ಯಾಟ್ರಿಕ್ಯುಲೇಶನ ವರೆಗೆ ಬಹು ಕಷ್ಟಬಟ್ಟು ಕಲಿತು ಅದರಲ್ಲಿ ತೇರ್ಗಡೆ ಹೊಂದಿದರು. ಬಡತನದ ಮೂಲಕ ಮುಂದೆ ಕಲಿಯುವದಾಗಲಿಲ್ಲ. ಶಿಕ್ಷಕನ ಕೆಲಸ ಕೈಕೊಂಡು ಅಧಿಕಾರಿಗಳ ಮನ ಮೆಚ್ಚುವಂತೆ ದುಡಿದರು. ಮುಂದೆ ಡೆಪ್ಯೂಟಿ ಇನಸ್ಪೆಕ್ಟರರಾಗಿಯೂ, ಟ್ರೇನಿಂಗ ಕಾಲೇಜನ ಪ್ರಿನ್ಸಿಪಾಲರಾಗಿಯೂ ಒಳ್ಳೆಯ ಕರ್ತವ್ಯದಕ್ಷತೆಯಿಂದ ಕೆಲಸಮಾಡಿ ನಿವೃತ್ತರಾದರು. ಇಲ್ಲಿಂದಲೇ ಇವರ ಲೋಕಸೇವೆಯ ಕಾರ್ಯಕ್ಷೇತ್ರ ವಿಸ್ತಾರವಾಯಿತು. ಮುಂಬಯಿ ಶಾಸನ ಸಭೆಯ ಸದಸ್ಯ ರಾಗಿ ಜಿಲ್ಹಾ ಲೋಕಲ್‌ಬೋರ್ಡ ಅಧ್ಯಕ್ಷರಾಗಿ, ಮುನಸಿಪಾಲಟಿಯ ಅಧ್ಯಕ್ಷರಾಗಿ, ಗೌರವ ಮ್ಯಾಜಿಸ್ಟ್ರೇಟರಾಗಿ ಲೋಕಸೇವೆಯನ್ನು ಮಾಡಿ ಕೀರ್ತಿಗಳಿಸಿದರು. ಕರ್ನಾಟಕ ಕಾಲೇಜ ಸ್ಥಾಪಿಸುವಂತೆ ಮಾಡಿದ್ದು ಕನ್ನಡ ನಾಡಿಗೆ ದೊಡ್ಡ ಉಪಕಾರವಾಯಿತು. ಸರಕಾರದವರಿಂದ ದಿವಾನ ಬಹದ್ದೂರ ಹಾಗು ಸಿ. ಆಯ್. ಇ. ಎಂಬ ಗೌರವದ ಪದವಿಗಳನ್ನು ಪಡೆದು ಕನ್ನಡಿಗರ ಕೀರ್ತಿಗೆ ಕಾರಣರಾದರು. ಇವರ ನೆನಪಿನ ಶಕ್ತಿ ಅಗಾಧವಾದದ್ದಿತ್ತು.

**ಬಿಡಸಿದ ಅಭ್ಯಾಸನಗಳು**

೧. ರೊದ್ದರಾಯರು ದೊಡ್ಡ ಮನುಷ್ಯರು.

೩. ಸಾಮಾನ್ಯವಾಗಿ ಮನುಷ್ಯರು ಸ್ವಾರ್ಥಪರರು. ಆದರೆ ದೊಡ್ಡವರೆನಿಸುವರು ಸ್ವಾರ್ಥವನ್ನು ಬಯಸದೆ ನಾಡಿನ ಹಿತಕ್ಕೆ ದೇಹ ಸವೆಸುವರು. ಇಂಥವರು 'ನಾಡಿಗಾಗಿ ನಾನು' ಎಂದು ತಿಳಿಸಿ ಜನ ಸೇವೆ ಮಾಡುವರು.

೪. ಕರ್ನಾಟಕ ಕಾಲೇಜ ಸ್ಥಾಪಿಸಿ ನಾಡಿಗೆ ದೊಡ್ಡ ಉಪಕಾರ ಮಾಡಿದರು.

೭. ಕೆಳಗೆ ಕೊಟ್ಟ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ದಪ್ಪಕ್ಷರಗಳಿಂದ ತುಂಬಿರಿ.

(ಅ) ಆದರೆ 'ನಾಡಿಗಾಗಿ ನಾನು' ಎಂದು ನಾಡಿನ ಸೇವೆಯನ್ನು ಮಾಡುವವರು ಬಹಳ ವಿರಳ. (ಆ) ತಾಯಿ ಸುಬ್ಬಮ್ಮನವರು ಬಹಳ ಧೋರಣೆಯುಳ್ಳವರು. (ಇ) ರೊದ್ದರಾಯರು ಸೇವಾನಿವೃತ್ತರಾಗಿ ಮುಂಬಯಿ ಇಲಾಖೆಯ ಶಾಸನ ಸಭೆಯ ಸದಸ್ಯರಾದರು. (ಈ) ಕರ್ನಾಟಕ ಕಾಲೇಜದ ಸ್ಥಾಪನೆಯ ಕೆಲಸದಲ್ಲಿ ಇವರಿಬ್ಬರು ಕರ್ನಾಟಕ ಮಾತೆಯ ಎರಡು ತೋಳುಗಳೆಂದು ಹೇಳಬಹುದು. (ಉ) ಅರವತ್ತು ವರ್ಷಕ್ಕೆ 'ಅರವು ಮರವು' ಆಗುವದು.

# ೨೪. ಕುಮಾರಿ ಫ್ಲಾರೆನ್ಸ್ ನಾಯಿಟಿಂಗೇಲಳು

ಕುಮಾರಿ – ಮದುವೆಯಾಗದಿದ್ದವಳು ಮಿಗಿಲು – ಮೇಲು ತಾಳ್ಮೆ – ಸಹನೆ
ಮನಃಪೂರ್ವಕ – ಮನಸುಗೊಟ್ಟು ವಿಶಿಷ್ಟ – ವಿಶೇಷವಾದ, ಹೆಚ್ಚಿನ ಶಕ್ತಿ
ಸಮಭಾವ ವೃತ್ತಿ – ಸಮಾನವೆಂದು ತಿಳಿಯುವ ನಡತೆ ಕರ್ತವ್ಯ – ಮಾಡತಕ್ಕ
(ಅ+ವಿಶ್ರಾಂತ) ಅವಿಶ್ರಾಂತ – ದಣವಿಲ್ಲದ, ಬಿಡುವಿಲ್ಲದ ಕೆಲಸ
(ವಾತ+ಆವರಣ) ವಾತಾವರಣ – ಸುತ್ತುಮುತ್ತಲಿನ ಸ್ಥಿತಿ
ಗುಣ+ಶೀಲ+ಸಂಪನ್ನೆ – ಗುಣಶೀಲಗಳಿಂದ ಕೂಡಿದವಳು ಪರಿಶುದ್ಧ – ಅ
ಸ+ಶಾಸ್ತ್ರವಾಗಿ – ತಾತ್ವಿಕವಾಗಿ, ಶಾಸ್ತ್ರಕ್ಕೆ ಅನುಸರಿಸಿ ತ್ಯಂತ ನಿರ್ಮಲ
ದಾಯಿ – ಆರೈಕೆ ಮಾಡುವ ಜ್ಞಾನವಿದ್ದ ಸೇವಿಕೆ ಶುಶ್ರೂಷೆ – ಆರೈಕೆ

ಜಲಸಮಾಧಿ ಹೊಂದು – ನೀರಿನಲ್ಲಿ ಮುಳುಗಿ ಸಾಯು   ವಿಧಾನ – ರೀತಿ
(ಮರಣ+ಉತ್+ಮುಖ) ಮರಣೋನ್ಮುಖ – ಮರಣಕ್ಕೆ ಎದುರಾದ ಸಾವಿಗೆ
ಸಂದರ್ಶಿಸಿ – ಭೆಟ್ಟಿಕೊಟ್ಟು, ಮೃತ್ಯುಲೋಕ – ಭೂಲೋಕ   ಎದುರಾದ
ಸ್ವಾಗತಿಸು – ಸುಖಾಗಮನ ಬಯಸು ಘೋರ ಸಂಗ್ರಾಮ – ಭಯಂಕರ
ಪಾರಿತೋಷಕ – ಇನಾಮು   ಮಹಿಳೆ – ಸ್ತ್ರೀ   ಕಾಣಗ
ಅರ್ಪಣ ಮಾಡು – ಕೊಡು ನಿಧಿ – ಕೂಡಿಸಿಕೊಟ್ಟ ಹಣ ಜನಾಂಗ – ಜನರ
ಆಗರ್ಭ – ಗರ್ಭದಲ್ಲಿರುವಾಗಲೆ ಆದರ್ಶ – ಮಾದರಿಯ.ವ   ಗುಂಪು

**ಪಾಠದ ಸಾರ—** ಕುಮಾರಿ ಫ್ಲಾರೆನ್ಸ್ ನಾಯ್‌ಟಿಂಗೇಲಳು ತನ್ನ ಇಡಿಯ ಜೀವನವನ್ನೇ ಜನಹಿತದ ಸಲುವಾಗಿ ವೆಚ್ಚಮಾಡಿದಳು. ರೋಗಿಗಳ ಆರೈಕೆ ಮಾಡಲಿಕ್ಕೆ ಬೇಕಾಗುವ ತಾಳ್ಮೆ, ಶಾಂತತನ, ಸಂಭಾವವೃತ್ತಿ ಮೊದಲಾದ ಗುಣಗಳು ಗಂಡಸರಿಗಿಂತ ಹೆಣ್ಣುಮಕ್ಕಳಲ್ಲಿ ವಿಶೇಷವಾಗಿರುತ್ತದೆಂದೂ, ಬೇನೆಯವರ ಆರೈಕೆಯು ಸ್ತ್ರೀಯರ ವಿಶಿಷ್ಟವಾದ ಕರ್ತವ್ಯವೆಂದೂ ತಿಳಿದು ಈ ಪವಿತ್ರ ಕರ್ತವ್ಯದಲ್ಲಿ ಅವಿಶ್ರಾಂತ ಪರಿಶ್ರಮಮಾಡಿ ದುಡಿದು ಸ್ತ್ರೀ ಜನಾಂಗಕ್ಕೆ ಉದಾಹರಣೆ ಹಾಕಿಕೊಟ್ಟಿದ್ದಾಳೆ. ಬೇನೆಯವರ ಶುಶ್ರೂಷೆ ಮಾಡಲಿಕ್ಕೆ ಬೇಕಾಗುವ ಶಿಕ್ಷಣವನ್ನು ಸಶಾಸ್ತ್ರವಾಗಿ ಪಡೆದು ಯುರೋಪದ ಬೇರೆಬೇರೆ ದೇಶಗಳ ಹೆಸರಾದ ದವಾಖಾನೆಗಳನ್ನು ಸಂದರ್ಶಿಸಿ ಹೆಚ್ಚಿನ ಜ್ಞಾನ ಸಂಪಾದಿಸಿದಳು. ದಾಯಿಗಳ ಶಿಕ್ಷಣವನ್ನು ಸ್ವತಃ ಪಡೆದು, ದಾಯಿಗಳ ಶಿಕ್ಷಣಶಾಲೆಯನ್ನು ಕೂಡಾ ನಡೆಯಿಸಿದಳು. ಇವಳು ಕ್ರಿಮಿಯಾ ಯುದ್ಧದಲ್ಲಿ ಐದು ತಿಂಗಳು ವಿಶ್ರಾಂತಿ ಇಲ್ಲದೆ ರೋಗಿ ಸೈನಿಕರ ಆರೈಕೆಯನ್ನು ಉತ್ತಮರೀತಿಯಿಂದ ಮಾಡಿ ಅಸಂಖ್ಯ ಸೈನಿಕರನ್ನು ಬದುಕಿಸಿ ಕೀರ್ತಿಗಳಿಸಿದಳು. ನಾಯ್‌ಟಿಂಗೇಲಳು ಇನ್ನೂ ಅನೇಕ ಪರೋಪಕಾರದ ಕಾರ್ಯ ಮಾಡಿದ್ದಾಳೆ.

ಇವಳು ಗುಣಶೀಲ ಸಂಪನ್ನೆಯೂ, ತುಂಬಾ ಕೋಮಲ ಸ್ವಭಾವದವಳೂ ಆಗಿ ಕೊನೆಯವರೆಗೂ ಮದುವೆಯಾಗದೆ ಕುಮಾರಿಯಾಗಿಯೇ ಉಳಿದಳು. ನಾಯ್‌ಟಿಂಗೇಲಳು ಎಲ್ಲ ದೇಶಗಳ ನಾರಿಯರಿಗೂ ಆದರ್ಶಳಾಗಿದ್ದಾಳೆ. ಇಂಥ ಸ್ತ್ರೀರತ್ನಗಳು ಸಿಗುವದು ವಿರಳ.

**ಬಿಡಿಸಿದ ಅಭ್ಯಸನಗಳು**

೮. ಕೆಳಗೆ ಕೊಟ್ಟ ಶಬ್ದಗಳನ್ನು ಬಳಸಿ ಹೊಸವಾಕ್ಯಗಳನ್ನು ರಚಿಸಿದೆ. ಬಳಸಿದ ಶಬ್ದಗಳನ್ನು ದಪ್ಪಕ್ಷರಗಳಿಂದ ತೋರಿಸಿದೆ.

(೧) ಪ್ರತಿಯೊಬ್ಬ ಮನುಷ್ಯನಲ್ಲಿ **ಸೇವಾಬುದ್ಧಿ** ಇರಬೇಕು. (೨) ನಮ್ಮೂರ ದವಾಖಾನೆಯಲ್ಲಿ ರೋಗಿಗಳ **ಆರೈಕೆ** ಚನ್ನಾಗಿ ಆಗುತ್ತದೆ. (೩) ಪಂಡಿತ ಜವಾಹರಲಾಲರು ದೇಶಕ್ಕಾಗಿ **ಅವಿಶ್ರಾಂತ** ದುಡಿಯುತ್ತಿದ್ದಾರೆ. (೪) ವಿಮಾನ ಅಪಘಾತದಲ್ಲಿ ಗಾಯಗೊಂಡ ಜನರು **ಒರಲುವದನ್ನು** ಕೇಳುವದು ನನ್ನಿಂದ ಆಗಲಿಲ್ಲ. (೫) ಹರಿಜನರಲ್ಲಿರುವ ದೇವದಾಸಿ ಪದ್ಧತಿಯನ್ನು ಕಂಡು **ಕನಿಕರ** ಉಂಟಾಗುತ್ತದೆ. (೬) ಪಾನಿಪತ್ತ **ಸಂಗ್ರಾಮದಲ್ಲಿ** ಬಾಬರನು ಇಬ್ರಾಹಿಮ ಲೋದಿಯನ್ನು **ಸೋಲಿಸಿದನು.** (೭) ನಮ್ಮಲ್ಲಿ ಈ ವರುಷ ಆಹಾರ **ಸಾಮಗ್ರಿ** ಸಾಕಷ್ಟಿಲ್ಲ. (೮) ವಿಷಮದಲ್ಲಿ ರೋಗಿಯ **ಶುಶ್ರೂಷೆ** ಚನ್ನಾಗಿ ಆಗಬೇಕು.

---

# ೨೫. ಮದಿರಾ ರಾಕ್ಷಸ

ಮದಿರಾ – ಸೆರೆ ಸ್ಥಿತಿವಂತ – ಹಣವುಳ್ಳವ ಕವುತ – ಒಕ್ಕಲತನ
ಬೋಧಮಾಡು – ಬುದ್ಧಿಹೇಳು ರಾಜ್ಯಭಾರ – ರಾಜ್ಯದಾಡಳಿತೆ
ಕುಶಲ – ಜಾಣ ಓಲಗ – ಸಭೆ ಮೋಡಿಕಾರ – ಮಾಟಗಾರ
ಖ್ಯಾತಿವಂತ – ಹೆಸರು ಪಡೆದವ ಕುತೂಹಲ – ಲವಲವಿಕೆ
(ಉತ್+ಮತ್ತ) ಉನ್ಮತ್ತ – ಸೊಕ್ಕಿದವ ಒನಪು – ಒಯ್ಯಾರ
ಪೇಯ – ಕುಡಿಯುವ ಪದಾರ್ಥ ಹೇಕರಿಸು – ಧ್ವನಿಮಾಡು ಕರ್ಕಶ – ಕಠಿಣ
ಅಸಹ್ಯಪಡು – ಹೇಸಿಕೊಳ್ಳು (ಮದ+ಅಂಧ) ಮದಾಂಧ – ಸೊಕ್ಕಿನಿಂದ
ಪ್ರಭಾವ – ಶಕ್ತಿ ಹೀನಸ್ಥಿತಿ – ಕೆಟ್ಟಸ್ಥಿತಿ ಕುರುಡ

ಕಲಿತವರು–ಕಲಿಯದವರು, ಬಡವರು–ಶ್ರೀಮಂತರು, ಸಣ್ಣವರು–ದೊಡ್ಡವರು ಇವು ವಿರುದ್ಧಾರ್ಥ ಕೊಡುವ ಶಬ್ದಗಳು.

**ಪಾಠದ ಸಾರ—** ಮೋಡಿಕಾರನು ಮಂತ್ರಿಯಲ್ಲಿ ತೋರಿದ ಮಾಯಾಶಕ್ತಿಯು ಅವನು ಕೊಟ್ಟ ಮದಿರಾ ಪೇಯದಲ್ಲಿ ಇರುವದು. ಒಂದು

ಗುಟುಕು ಮದ್ಯಪಾನ ಮಾಡಿದರೆ ಕ್ರೂರನಾಗುವನು. ಎರಡು ಗುಟುಕು ಸೇವಿಸಿದರೆ ಮದಾಂಧನಾಗುವನು. ಮೂರು ಗುಟುಕು ಕುಡಿದರೆ ಬುದ್ಧಿಯನ್ನು ಕಳೆದುಕೊಂಡು ಮೂರ್ಖನಾಗುವನು. ನಾಲ್ಕು ಗುಟುಕು ಕುಡಿಯುವವರಿಂದ ಮಾನಮರ್ಯಾದೆ ಕಳೆದುಕೊಳ್ಳುವನು. ಎಂದು ಮದಿರಾ ರಾಕ್ಷಸನ ಕಥೆಯಲ್ಲಿ ತೋರಿಸಲಾಗಿದೆ. ಆದ್ದರಿಂದ ಯಾರೂ ಮದ್ಯಪಾನ ಮಾಡಬಾರದು.

### ಬಿಡಿಸಿದ ಅಭ್ಯಾಸಗಳು

೨. ಕಲಿತವರು, ಕಲಿಯುವವರು, ಬಡವರು, ಶ್ರೀಮಂತರು, ಸಣ್ಣವರು, ದೊಡ್ಡವರು ಹೀಗೆ ಎಲ್ಲರೂ ಮಾಟಗಾರನ ಮಾಯಾ ಶಕ್ತಿಗೆ ಮೆಚ್ಚಿದರು.

೫. ಮೋಡಿಕಾರನು ಮಂತ್ರಿಗೆ ಮದಿರಾಪಾನ ಮಾಡಿಸಿ ಅವನನ್ನು ಉನ್ಮತ್ತನಂತೆಯೂ ಮದಾಂಧನಂತೆಯೂ, ಮೂರ್ಖನಂತೆಯೂ, ಮಾನ ಮರ್ಯಾದೆ ಬಿಟ್ಟವನಂತೆಯೂ ವರ್ತಿಸ ಹಚ್ಚಿದ್ದನ್ನು ತಿಳಿದಾಗಲೇ ಮದಿರಾರಾಕ್ಷಸನ ಪ್ರಭಾವವು ತಿಳಿಯಿತು.

೬. ಕೆಳಗೆ ಕೊಟ್ಟ ಶಬ್ದಗಳನ್ನು ದಪ್ಪಕ್ಷರಗಳಿಂದ ಉಪಯೋಗಿಸಿ ವಾಕ್ಯ ರಚಿಸಿದೆ.

(೧) ಅರಸನ ಓಲಗದಲ್ಲಿ ಅನೇಕ ರಾಯಭಾರಿಗಳಿರುತ್ತಾರೆ. (೨) ಈ ಊರಿಗೆ ಒಬ್ಬ ಮೋಡಿಕಾರನು ಬಂದಿದ್ದಾನೆ. (೩) ನನ್ನ ಮಾಯಾ ಶಕ್ತಿಯನ್ನು ಖ್ಯಾತಿವಂತನಾದ ಮಂತ್ರಿಯ ಮೇಲೆ ಪ್ರಯೋಗಿಸುವೆನು. (೪) ಮೋಡಿಕಾರನು ಮಾಯಾಶಕ್ತಿಯನ್ನು ಮಂತ್ರಿಯ ಮೇಲೆ ಪ್ರಯೋಗಿಸಿದನು. (೫) ಪೇಯಗಳಲ್ಲಿ ಮದಿರೆಯು ಬಲು ಕೆಟ್ಟದು. (೬) ಆ ಸ್ತ್ರೀಯ ಒನಪು ನೋಡತಕ್ಕದ್ದಿದೆ. ಮನುಷ್ಯನು ಮದಾಂಧನು ಆಗಬಾರದು.

## ೨೬. ಸರ್ವಜ್ಞನ ವಚನಗಳು

ಸತ್ತಿಗೆ – ಕೊಡೆ, ಛತ್ರಿಗೆ        ಸತ್ಯ – ಖರೇತನ

**ಸರಳಾರ್ಥ—** ಹುತ್ತು ಹಾವಿಗೆ ಚೆಂದ, (ಸುರಕ್ಷಿತವಾದದ್ದು) ಮುತ್ತು ಕೊರಳಿಗೆ ಚೆಂದ (ಶೋಭೆ ಕೊಡುವಂಥದು) ಛತ್ತರಿಗೆಯು ಅರಸನಿಗೆ ಚೆಂದ (ಸಾರ್ವಭೌಮತ್ವ ತೋರಿಸುವಂಥದು) ಆದರೆ ಸತ್ಯವು ಲೋಕದ ಎಲ್ಲ ಜನರಿಗೂ ಚೆಂದವಾದದ್ದು. (ಸುಖದಾಯಕವಾದದ್ದು.)

ವಿ. ವಿ— ಪ್ರತಿ ಪದ್ಯದ ಕೊನೆಗೆ ಸರ್ವಜ್ಞ ಎಂಬ ಪದಪ್ರಯೋಗವಾಗಿದೆ. ಸರ್ವ+ಜ್ಞ ಅಂದರೆ ದೇವರು, ಎಲ್ಲವನ್ನೂ ತಿಳಿದವ ಎಂಬರ್ಥ. ಕವಿಯು ತಾನು ಎಲ್ಲವನ್ನೂ ತಿಳಿದವನು ಎಂಬದನ್ನು ಸೂಚಿಸಲಿಕ್ಕೂ, ದೇವರನ್ನು ಸ್ಮರಿಸಲಿಕ್ಕೂ ತನಗೆ ಸರ್ವಜ್ಞನೆಂದು ಹೆಸರನ್ನು ಇಟ್ಟುಕೊಂಡಿದ್ದಾನೆ. ಸರ್ವಜ್ಞ ಎಂಬದು ಕವಿಯ ಮುದ್ರಿಕೆಯು.

### ೨ ನೇ ನುಡಿ

ಸಿರಿ – ಸಂಪತ್ತು ಧರ್ಮ – ದಾನ, ಪರೋಪಕಾರ
ಪರಿಣಾಮ – ಸುಖ, ಸುಖರೂಪ ಪದ – ಸ್ಥಾನ

**ಸರಳಾರ್ಥ—** ಸಂಪತ್ತು ಬಂದ ಕಾಲಕ್ಕೆ (ಅನಾಥರನ್ನೂ, ಅಂಗಹೀನರನ್ನೂ) ಕರೆದು ದಾನಧರ್ಮ ಮಾಡಬೇಕು. ಅಂದರೆ ಆದರಿಂದ (ಮನುಷ್ಯನಿಗೆ) ಸುಖವೂ, ಹೆಚ್ಚಿನ ಸ್ಥಾನವೂ ದೊರೆಯುವದು. ಕೈಲಾಸವು ನೆರೆಮನೆಯಂತೆ (ಸಮೀಪ) ಆಗುವದು.

### ೩ ನೇ ನುಡಿ

ಮೇಲು – ಮಿಕ್ಕಾದದ್ದು, ಹೆಚ್ಚಿನದು ಪ್ರಾಣ – ಜೀವ

**ಸರಳಾರ್ಥ—** ಅನ್ನದಾನಕ್ಕಿಂತಲೂ ಇನ್ನು (ಹೆಚ್ಚಿನ) ದಾನಗಳಿಲ್ಲ ಅನ್ನಕ್ಕಿಂತ ಹೆಚ್ಚಿನದು ಯಾವದೂ ಇಲ್ಲ. ಲೋಕಕ್ಕೆಲ್ಲ (ಪ್ರಾಣಿಗಳಿಗೆಲ್ಲ) ಅನ್ನವೇ ಜೀವವಾಗಿರುವದು. (ಅನ್ನದಿಂದಲೇ ಪ್ರಾಣಿಗಳು ಬದುಕುವವು ಎಂಬರ್ಥ.

### ೪ ನೇ ನುಡಿ

ಗಳಿಸಿ – ಸಂಪಾದಿಸಿ ಬಚ್ಚಿಡು – ಹುಗಿದಿಡು

**ಸರಳಾರ್ಥ—** ಒಡವೆಗಳನ್ನು (ಬೆಳ್ಳಿ-ಬಂಗಾರ-ದ್ರವ್ಯಗಳನ್ನು) ಸಂಪಾದಿಸಿ, ಉಣ್ಣದೆ (ಉಪಭೋಗ ಮಾಡದೆ) ನೆಲದಲ್ಲಿ ಹುಗಿದಿಟ್ಟು

(ಜನರಿಗೆ ತಿಳಿಯಬಾರದೆಂದು) ಚನ್ನಾಗಿ ನೆಲವನ್ನು ಸಾರಿಸಿದ (ಮನುಷ್ಯನ) ಬಾಯೊಳಗೆ ಮಣ್ಣು ಕಂಡೆಯಾ? (ತನಗೂ ಪರರಿಗೂ ಉಪಯೋಗ ಬೀಳುವದಿಲ್ಲ. ಎಂದರ್ಥವು.)

### ೫ ನೇ ನುಡಿ

(ಕೊಂಬ+ಆಗ) ಕೊಂಬಾಗ – ತರುವ ಸಮಯದಲ್ಲಿ
(ಕೆಳಗು+ಬದಿ) ಕಿಬ್ಬದಿ – ಕೆಳಮುಗ್ಗಲು
(ಸಾಲ+ಇಗ) ಸಾಲಿಗ – ಸಾಲಕೊಟ್ಟವ, ಸಾವಕಾರ
(ಹಾಲು+ಓಗರ – ಹಾಲೋಗರ - ಹಾಲು ಅನ್ನ

**ಸರಳಾರ್ಥ—** (ಮನುಷ್ಯನು) ಸಾಲವನ್ನು ತರುವ ಕಾಲಕ್ಕೆ ಹಾಲುಅನ್ನ ಉಂಡಹಾಗೆ (ಆನಂದ ಪಡುವನು) ಸಾವಕಾರನು ಬಂದು (ಸಾಲದ ಹಣ ಕೊಡಬೇಕೆಂದು) ಎಳೆಯುತ್ತಿರುವಾಗ ಕೆಳಬದಿಯ ಕೀಲವು (ಟೊಂಕವು) ಮುರಿದಂತೆ (ಕುಪ್ಪರಿಸಿ ಬೀಳುವನು.)

### ೬ ನೇ ನುಡಿ

ಸಂಗ – ಗೆಳೆತನ
ಇಹ – ಇರುವ

**ಸರಳಾರ್ಥ—** ಒಳ್ಳೆಯವನು ಇಲ್ಲದ ಊರು, ಕಳ್ಳನ ಗೆಳೆತನ, ಸುಳ್ಳಾಡುವವರ ಮಾತು ಇವು ಮೂರು ಕೆಸರೊಳಗೆ ಇರುವ ಮುಳ್ಳನ್ನು ತುಳಿದಂತೆ (ದುಃಖವನ್ನು ಉಂಟುಮಾಡುವವು.)

### ಬಿಡಿಸಿದ ಅಭ್ಯಸನಗಳು

೧. ಲೋಕಕ್ಕೆ ಸತ್ಯವೇ ಚಂದವು. . ಅಂದರೆ ಸುಖಕೊಡುವಂಥದು

೨. ಎಲ್ಲ ದಾನಗಳಲ್ಲಿ ಅನ್ನದಾನವೇ ಶ್ರೇಷ್ಠವಾದದ್ದು.

೩. ಧನವಿದ್ದು ಉಣ್ಣದಿದ್ದವನ ಬಾಯೊಳಗೆ ಮಣ್ಣು ಬೀಳುವದು. ಅಂದರೆ ಅವನಿಗೆ ಹಿತವಾಗುವದಿಲ್ಲ.

೪. (೬ನೇ ಪದ್ಯದ ಭಾವವನ್ನು ಹೇಳಿರಿ.)

---

## ೨೭. ವಿಜ್ಞಾನಿ ಥಾಮಸ್ ಎಡಿಸನ್

(ವಿದ್ಯುತ್+ಶಕ್ತಿ) ವಿದ್ಯುಚ್ಛಕ್ತಿ – ವಿದ್ಯುತ್ತಿನ ಶಕ್ತಿ, ಮಿಂಚಿನ ಶಕ್ತಿ
(ವಿದ್ಯುತ್+ದೀಪ) ವಿದ್ಯುದ್ದೀಪ – ವಿದ್ಯುತ್ತಿನ ದೀಪ, ಕೆನ್ನೆ – ಕಪಾಳ

ವಿಜ್ಞಾನಿ – ಪ್ರಯೋಗಗಳಿಂದ ಪದಾರ್ಥಗಳ ಗುಣಧರ್ಮ ಗೊತ್ತು ಹಚ್ಚುವವ
ಅನಾಹುತ – ಕೇಡು   ಎದೆಗುಂದು – ಧೈರ್ಯಬಿಡು
ಆಳವಾದ – ದೀರ್ಘವಾದ ಅನುವು – ಅವಕಾಶ, ಸ್ಥಳ ಸಂಚಾಲಕ – ನಡೆ
ಸುಖವಿಲಾಸ – ಸೊಗಸುಗಾರಿಕೆ ವ್ಯಯಮಾಡು – ವೆಚ್ಚಮಾಡು ಯಿಸುವವ
ಬುಡ್ಡಿ – ಬುರುಡಿ ಚಲನ ಚಿತ್ರ – ಹಾವಭಾವನೊಡುವ ಚಿತ್ರ
ಛಾಯಾಯಂತ್ರ – ಮ್ಯಾಜಿಕ್ ಲ್ಯಾಂಟರ್ನ್ (ಕರ್ತೃ+ತ್ವ+ಶಾಲಿ) ಕರ್ತೃತ್ವ
ವಿಪುಲ – ಬಹಳ ಶಾಲಿ–ಮಾಡತಕ್ಕ ಕೆಲಸವನ್ನು ದಕ್ಷತೆಯಿಂದ ಮಾಡುವವ
ಅಗ್ರಗಣ್ಯ – ಶ್ರೇಷ್ಠ

**ಪಾಠದ ಸಾರ—** ವಿಜ್ಞಾನಿ ಎಡಿಸನ್ನನು ಅಮೇರಿಕೆಯ ಮಿಲನ ನಗರದಲ್ಲಿ ಕ್ರಿ. ಶ. ೧೮೪೭ರಲ್ಲಿ ಹುಟ್ಟಿದನು. ಹನ್ನೆರಡು ವರ್ಷದವನಿದ್ದಾಗಲೇ ವಿಜ್ಞಾನದ ಪ್ರಯೋಗಗಳನ್ನು ಮಾಡಲಿಕ್ಕೆ ಆರಂಭಿಸಿದನು. ಈತನು ಸಾವಿರಕ್ಕೆ ಮಿಕ್ಕಿದ ಶೋಧಗಳನ್ನು ಮಾಡಿ ಪ್ರಪಂಚಕ್ಕೆ ಅನೇಕ ಸುಖಸಾಧನೆಗಳನ್ನು ಒದಗಿಸಿಕೊಟ್ಟಿದ್ದಾನೆ. ವಿದ್ಯುದ್ದೀಪ, ಗ್ರಾಮೊಫೋನ್ ವಿದ್ಯುತ್ತಿನ ಬಂಡಿ, ತಂತಿ ಟಪಾಲಿನ ಯಂತ್ರಗಳು ಚಲನ ಚಿತ್ರ ತೆಗೆಯುವ ಛಾಯಾಯಂತ್ರ ಇವೇ ಮುಂತಾದವು ಇವನು ಮಾಡಿದ ಮಹತ್ವದ ಶೋಧಗಳಾಗಿವೆ. ಪ್ರತಿಯೊಂದು ಶೋಧಕ್ಕೆ ಸಾವಿರಾರು ಪ್ರಯೋಗಗಳನ್ನು ಮಾಡಿದ ಮೇಲೆ ಯಶ ದೊರಕಿಸಿದ್ದಾನೆ. ಇವನು ಕರ್ತೃತ್ವಶಾಲಿಯೂ, ಸದಾ ಉದ್ಯೋಗಪ್ರಿಯನೂ, ತಾಳ್ಮೆಯುಳ್ಳವನೂ ಆಗಿದ್ದದರಿಂದಲೇ ಇಂಥ ಶೋಧಗಳನ್ನು ಮಾಡಲಿಕ್ಕೆ ಸಾಧ್ಯವಾಯಿತೆಂದು ಹೇಳಬಹುದು. ವಿಜ್ಞಾನಿಗಳಲ್ಲಿ ಅಗ್ರಗಣ್ಯನಾದ ಎಡಿಸನ್ನನು ಕ್ರಿ. ಶ. ೧೯೩೧ರಲ್ಲಿ ಮರಣಹೊಂದಿದನು. ಎಡಿಸನ್ನನು ವಿಪುಲಕೀರ್ತಿಗೆ ಪಾತ್ರನಾಗಿದ್ದಾನೆ.

## ಬಿಡಿಸಿದ ಅಭ್ಯಾಸಗಳು

೧. ತಾಯಿಯ ಬಳಿಯಲ್ಲಿಯೇ ತುಸು ಓದುಬರೆಹ ಕಲಿತನು. ಹೆಚ್ಚಿನ ಶಿಕ್ಷಣ ಪಡೆಯಲಿಲ್ಲ.

೨. ಉಗಿಬಂಡಿಯಲ್ಲಿ ಪ್ರಯೋಗ ಮಾಡುತ್ತಿದ್ದಾಗ ಕಿಡಿಸಿಡಿದು ಉಗಿಬಂಡಿಗೆ ಹಾನಿ ತಟ್ಟಿತು. ಅಧಿಕಾರಿಯು ರೇಗಿ ಕೆನ್ನೆಗೆ ಬಲವಾದ ಏಟು ಕೊಟ್ಟದ್ದರಿಂದ ಎಡಿಸನ್ನನ ಕಿವಿಗಳು ಕಡೆತನಕ ಕಿವುಡಾದವು.

೩. ವಿದ್ಯುದ್ದೀಪ, ಗ್ರಾಮೊಫೋನ್, ವಿದ್ಯುತ್ತಿನ ಬಂಡಿ, ತಂತೀ ಟಪಾಲಿನ ಯಂತ್ರಗಳು, ಚಲನ ಚಿತ್ರ ತೆಗೆಯುವ ಛಾಯಾಯಂತ್ರ ಮೊದಲಾದವುಗಳನ್ನು ಎಡಿಸನ್ನನು ಶೋಧಿಸಿದನು.

---

# ೨೮. ಕಳ್ಳರನ್ನು ಮೋಸಗೊಳಿಸಿದ್ದು

ಮೋಸಗೊಳಿಸು – ಠಕ್ಕಿಸು ಅಪಹರಿಸು – ಎತ್ತಿಹಾಕು ಸಂಚು – ಗುಟ್ಟಿನ
ಸುಳುವು – ಸುಳಿದಾಟ ಅರಿಯದವ – ತಿಳಿಯದವ ಹಂಚಿಕೆ
ಉಪದ್ರವ – ಕಾಟ ಆಸ್ತಿ – ಗಳಿಕೆ, ಕೂಡಿಟ್ಟ ಸಂಪತ್ತು ಇಕ್ಕು – ಹಾಕು
ಉಬ್ಬಿ – ಹಿಗ್ಗಿ ಯಾತ – ಕಪ್ಪಲಿ, ಮೊಟ್ಟೆ
(ಉಸಿರು+ಕರೆ) ಉಸಿರುಗರೆ – ಉಸಿರು ಬಿಡು

**ಪಾಠದ ಸಾರ—** ತೆನ್ನಾಲ ರಾಮಕೃಷ್ಣನು ತನ್ನ ಮನೆಯಲ್ಲಿ ಕಳ್ಳರ ಸುಳಿವು ಕಂಡು, ಕಳ್ಳರನ್ನು ಮೋಸಗೊಳಿಸಿ, ತಕ್ಕ ಹಂಚಿಕೆಮಾಡಿ ಅವರಿಂದ ಬೆಳತನಕ ಯಾತ ಹೊಡಿಸಿಕೊಂಡು, ತೋಟದ ಮಡಿಗಳಿಗೆ ನೀರನ್ನು ಹಾಯಿಸಿಕೊಂಡನು. ಮತ್ತು ತನ್ನ ಆಸ್ತಿಯನ್ನು ಉಳಿಸಿ ಕೊಂಡನು.

ಚತುರರಾದವರು ಸಂಕಟ ಸಮಯದಲ್ಲಿ ಹೆದರದೆ ತಕ್ಕ ಹಂಚಿಕೆ ಯಿಂದ ಪಾರಾಗುವರು. ಒಂದು ಕಲ್ಲಿನಿಂದ ಎರಡು ಹಕ್ಕಿಗಳನ್ನು ಹೊಡೆದಂತೆ ತೆನ್ನಾಲ ರಾಮಕೃಷ್ಣನು ತನ್ನ ಆಸ್ತಿಯನ್ನು ಉಳಿಸಿಕೊಂಡ ನಲ್ಲದೆ ಕಳ್ಳರಿಂದ ಯಾತ ಹೊಡೆಯಿಸಿಕೊಂಡು ತೋಟದ ಮಡಿಗಳಿಗೆ ನೀರು ಹಾಯಿಸಿಕೊಂಡನು.

**ಬಿಡಿಸಿದ ಅಭ್ಯಾಸನಗಳು**

೧. ಬಹುಧನವಂತನೆಂದು ಹೆಸರಾದ ರಾಮಕೃಷ್ಣನ ಧನವನ್ನು ಅಪಹರಿಸಬೇಕೆಂದು ಕಳ್ಳರು ಅವನ ಮನೆಯೊಳಗೆ ಅಡಗಿಕೊಂಡರು.

೨. ಬಾವಿಯಲ್ಲಿ ನಾಲ್ಕು ಆಳು ನೀರು ಇದ್ದದ್ದನ್ನು ತಿಳಿದು ಕಳ್ಳರು ಚಿಂತೆಮಾಡಹತ್ತಿದರು.

೬. ಬೆಳಗು ಬಂದರೂ ಬಾವಿಯ ನೀರು ಸರಿಯದೆ ಇದ್ದದರಿಂದ ಕಳ್ಳರು ತಮಗೆ ಒಡವೆಸಿಗದೆ ವ್ಯರ್ಥವಾಗಿ ಶ್ರಮಪಟ್ಟೆವೆಂದು ಉಸಿರು ಗರೆದು ಕುಳಿತುಕೊಂಡರು.

ಕೆಳಗೆ ಕೊಟ್ಟ ಶಬ್ದಗಳ ಅರ್ಥ ಹೇಳಿದೆ.

ಕಣ್ಣುಚಿವುಟು – ಸನ್ನೆಮಾಡು ಹಿರಿದುಬೀಳು – ಬೇಗನೆ ತೀರು
ಉಸಿರುಗರೆ – ಉಸಿರುಬಿಡು ಟೊಂಕಕಟ್ಟು – ಸಿದ್ಧನಾಗು
ಧರ್ಮಕಟ್ಟಿಕೊ – ಪುಣ್ಯಪಡೆ

---

## ೨೯. ಸಿರಸಂಗಿ ಲಿಂಗರಾಜರು

ಮೇಧಾವಿ – ಬುದ್ಧಿಶಾಲಿ ಕುಶಲತೆ – ಜಾಣತನ ಗೌರವ – ಮರ್ಯಾದೆ
ವಿಸ್ತಾರ – ಹರವು ಪರಗಣೆ – ಜಿಲ್ಲೆ ದೇಸಗತಿ – ದೇಸಾಯಿಯವರ
ಮಟ್ಟ – ಆಳತೆ ಸಂತಾನ – ಸಂತತಿ ವ್ಯಾಜ್ಯ – ಜಗಳ ಸಂಸ್ಥಾನ
ಧರ್ಮಪತ್ನಿ – ಲಗ್ನದ ಹೆಂಡತಿ ಸಮರ್ಥಿಸಿ – ಒಪ್ಪಿ ವಿರತಿ – ವೈರಾಗ್ಯ
ಮ್ಯಾಜಿಸ್ಟ್ರೇಟ – ಫೌಜದಾರಿ ಖಟ್ಲೆಗಳನ್ನು ನಡಿಸುವವ ಮೃದು – ಮೆತ್ತಗೆ
ದುರ್ದೈವ – ಕೆಟ್ಟದೈವ ಸಂತರ್ಪಣೆ – ಕೊಡೋಣ ವಿವಾಹ – ಲಗ್ನ
ಕಲಾವಿದ – ಕಲೆಯನ್ನು ಬಲ್ಲವ, ಕಲೆಯಲ್ಲಿ ನಿಪುಣ ಖಂಡಿಸು – ಅಲ್ಲಗಳೆ
ಪ್ರೋತ್ಸಾಹ – ಉತ್ತೇಜನ, ಹುರುಪು ಪ್ರಮುಖ – ಮುಖಂಡ, ಮುಂದಾಳು
ವೃದ್ಧವಿವಾಹ – ಮುಪ್ಪಿನಲ್ಲಿ ಮಾಡಿಕೊಳ್ಳುವ ಮದುವೆ ಪ್ರಕೃತಿ – ದೇಹದ
ದುಂದುಗಾರಿಕೆ – ಬಹಳ ಹಣ ವೆಚ್ಚಮಾಡೋಣ ಸ್ಥಿತಿ
ಮೃತ್ಯುಪತ್ರ – ಸಾಯುವ ಪೂರ್ವದಲ್ಲಿ ಆಸ್ತಿಯ ವ್ಯವಸ್ಥೆಯ ಸಲುವಾಗಿ
ವಿನಿಯೋಗಿಸು – ಉಪಯೋಗಿಸು ಅಮರ – ಶಾಶ್ವತ, ಸ್ಥಿರ ಬರೆದಿಟ್ಟ ಪತ್ರ
(ವಿದ್ಯಾ + ಅಭಿವೃದ್ಧಿ) ವಿದ್ಯಾಭಿವೃದ್ಧಿ – ವಿದ್ಯೆಯ ಬೆಳವಣಿಗೆ ಜ್ಯೋತಿ – ದೀಪ
ಶಿವಾಧೀನರಾಗು – ಮರಣ ಹೊಂದು ತ್ಯಾಗ – ತೊರೆಯುವಿಕೆ
ತ್ಯಾಗವೀರ – ತೊರೆಯುವಿಕೆಯಲ್ಲಿ ದಾನಮಾಡುವಲ್ಲಿ ಮಿಗಿಲಾದವ

ಪಾಠದ ಸಾರ— ಸಿರಸಂಗಿ ದೇಸಗತಿಗೆ ಲಿಂಗರಾಜರು ದತ್ತಕ ವಾಗಿ ಬಂದವರು. ಇಂಗ್ಲಿಷ ಏಳನೆಯ ಇಯತ್ತೆಯವರೆಗೆ ಕಲಿತರು.

ಮಲತಾಯಿಯು ಸಂಸ್ಥಾನದ ಬಗ್ಗೆ ವ್ಯಾಜ್ಯ ಹೂಡಿದ್ದರಿಂದ ಅನೇಕ ತೊಂದರೆಗಳೊದಗಿ ಮುಂದೆ ಕಲಿಯುವದಾಗಲಿಲ್ಲ. ಈ ವ್ಯಾಜ್ಯದಲ್ಲಿ ಮುಂಬಯಿ ಸರಕಾರದವರು ಲಿಂಗರಾಜರ ಪಕ್ಷ ಸಮರ್ಥಿಸಿ ಅವರ ದತ್ತಕವನ್ನು ಸ್ಥಿರಗೊಳಿಸಿದರು. ಈ ವ್ಯಾಜ್ಯದೊಳಗೆ ಲಿಂಗರಾಜರು ಬಹಳ ಕಷ್ಟಪಡಬೇಕಾದ್ದರಿಂದಲೂ, ಇಬ್ಬರು ಹೆಂಡಂದಿರು ತಮ್ಮ ದಿವಸಗಳಲ್ಲಿ ಸತ್ತದ್ದರಿಂದಲೂ, ಮೂರನೇ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಗಂಡುಮಗುವು ಬದುಕಲಿಲ್ಲವಾದ್ದರಿಂದಲೂ ಲಿಂಗರಾಜರಿಗೆ ಸಂಸಾರದಲ್ಲಿ ವಿರತಿ ಹುಟ್ಟಿ, ಮನಸು ಸಮಾಜಸೇವೆಯ ಕಡೆಗೆ ತಿರುಗಿತು. ಬಡವರ ಹಿತಕ್ಕೆ ಕೆರೆ-ಕಾಲುವೆ ಕಟ್ಟಿಸಿದರು. ವ್ಯಾಪಾರಿ ಸಂಘವನ್ನು ಸ್ಥಾಪಿಸಿದರು. ಯಾತ್ರಿಕರಿಗಾಗಿ ಧರ್ಮಶಾಲೆಗಳನ್ನು ಕಟ್ಟಿಸಿದರು. ಪಂಡಿತರಿಗೂ ಕಲಾವಿದರಿಗೂ ಪ್ರೋತ್ಸಾಹ ಕೊಡುತ್ತಿದ್ದರು. ಎರಡನೇ ವರ್ಗದ ಮ್ಯಾಜಿಸ್ಟ್ರೇಟರಾಗಿಯೂ ಮುಂಬಯಿ ಶಾಸನ ಸಭೆಯ ಸಭಾಸದರಾಗಿಯೂ ಸಾರ್ವಜನಿಕ ಸೇವೆಮಾಡಿದರು. ಬಾಲವಿವಾಹ ಪದ್ಧತಿಯನ್ನು ಖಂಡಿಸಿ, ವೃದ್ಧವಿವಾಹವನ್ನು ವಿರೋಧಿಸಿ, ವರದಕ್ಷಿಣೆ ಲಗ್ನಕಾಲದ ದುಂದುಗಾರಿಕೆಗಳನ್ನು ತಡೆದರು. ಒಕ್ಕಲತನದ ಹೊಸಪದ್ಧತಿಯನ್ನು ತಿಳಿಸಿಹೇಳಿದರು.

ವೀರಶೈವ ಸಮಾಜ ಹಿಂದುಳಿದದ್ದನ್ನು ತಿಳಿದು ಸಂಸ್ಥಾನದ ಉತ್ಪನ್ನವನ್ನೆಲ್ಲ ತಮ್ಮ ಸಮಾಜದ ಮಕ್ಕಳ ವಿದ್ಯಾಭಿವೃದ್ಧಿಗಾಗಿ ವಿನಿಯೋಗಿಸಬೇಕೆಂದು ಮೃತ್ಯುಪತ್ರ ಮಾಡಿ ಕ್ರಿ. ಶ. ೧೯೦೬ರಲ್ಲಿ ಶಿವಾಧೀನರಾದರು. ಲಿಂಗರಾಜರ ಮೃತ್ಯುಪತ್ರವು ತ್ಯಾಗದ ಜ್ಯೋತಿಯಾಗಿದೆ. ಸಮಾಜದ ಮಕ್ಕಳಿಗೆ ಅಮರಪತ್ರವಾಗಿದೆ. ತ್ಯಾಗವೀರ ಲಿಂಗರಾಜರ ಹೆಸರಿನಿಂದ ಶಾಲೆಕಾಲೇಜುಗಳು ನಡೆದವೆ. ಲಿಂಗರಾಜರ ಹೆಸರು ಅಮರವಾಗಿದೆ.

## ಬಿಡಿಸಿದ ಅಭ್ಯಸನಗಳು

೧. ಚಾಯಪ್ಪದೇಸಾಯಿಯವರು ದತ್ತಕ ತಂದೆಗಳು. ಗಂಗಾಬಾಯಿಯವರು ದತ್ತಕ ತಾಯಿಯವರು.

೨. ಲಿಂಗರಾಜರು ಪ್ರಾಥಮಿಕ ಶಿಕ್ಷಣ ಮುಗಿಸಿ ಇಂಗ್ಲಿಷ ಏಳನೆಯ ಇಯತ್ತೆಯ ವರೆಗೆ ಶಿಕ್ಷಣ ಪಡೆದರು.

೩. ಚಿಕ್ಕತನದಲ್ಲಿ ತಲೆಗೆ ಮಾಡಿಹುಣ್ಣಾಗಿ ಕಷ್ಟಪಟ್ಟರು. ಮಲ ತಾಯಿ ಹೊಡಿದ ವ್ಯಾಜ್ಯದಲ್ಲಿ ಮನೆತನದ ತೊಂದರೆಗಳನ್ನು ಅನುಭವಿ ಸಬೇಕಾಯಿತು. ಇಬ್ಬರು ಹೆಂಡಂದಿರು ತುಸು ದಿವಸಗಳ ಅಂತರದಲ್ಲಿ ಸತ್ತದ್ದರಿಂದಲೂ, ಮೂರನೆ ಹೆಂಡತಿಯಿಂದ ಹುಟ್ಟಿದ ಗಂಡುಮಗುವು ಬದುಕಲಿಲ್ಲವಾದ್ದರಿಂದಲೂ ಬಹಳ ಕಷ್ಟ ಅನುಭವಸಿದರು.

೪. ಒಂದರಹಿಂದೊಂದು ಬಂದ ಕಷ್ಟಪರಂಪರೆಗಳಿಂದ ಅವರಲ್ಲಿ ವಿರತಿ ಹುಟ್ಟಿ ಮನಸ್ಸು ಸಮಾಜ ಸೇವೆಯ ಕಡೆಗೆ ತಿರುಗಿತು.

---

# ೩೦. ಭರತನು ರಾಮನ ಪಾದುಕೆಗಳನ್ನು ತಂದದ್ದು

ಪೂರ್ವಕಥಾ ಸಂದರ್ಭ— ಅಯೋಧ್ಯೆಯ ಅರಸನಾದ ದಶರಥನು ರಾಮನಿಗೆ ಯುವರಾಜ್ಯಪಟ್ಟ ಕಟ್ಟಬೇಕೆಂಬ ಸಮಯದಲ್ಲಿ ಕೈಕೆಯಿಯು ಹಿಂದೆ ಪಡೆದ ಎರಡು ವರಗಳ ಉಪಯೋಗ ಮಾಡಿಕೊಂಡು, ರಾಮನು ಹದಿನಾಲ್ಕು ವರುಷ ವನವಾಸಕ್ಕೆ ಹೋಗಬೇಕೆಂತಲೂ ತನ್ನ ಮಗನಾದ ಭರತನಿಗೆ ಪಟ್ಟಗಟ್ಟಬೇಕೆಂತಲೂ ದಶರಥನಿಂದ ವಚನ ತೆಗೆದುಕೊಂಡಿದ್ದಳು. ಈ ಸಮಯದಲ್ಲಿ ಭರತನು ಅಯೋಧ್ಯೆಯಲ್ಲಿ ಇರಲಿಲ್ಲ. ತಂದೆಯ ವಚನ ಪಾಲನೆಗಾಗಿ ರಾಮನು ಸೀತಾಲಕ್ಷ್ಮಣರೊಡನೆ ವನಕ್ಕೆ ತೆರಳಿದನು. ದಶರಥನು ಪುತ್ರಶೋಕದಿಂದ ಮರಣಹೊಂದಿದನು. ಭರತನು ಬಂದು ನಡೆದ ಸಂಗತಿಯನ್ನೆಲ್ಲ ತಿಳಿದು ಬಹಳ ದುಃಖಿತನಾದನು. ರಾಮನ ಮೇಲೆ ಬಹಳ ಮಮತೆಯುಳ್ಳ ಭರತನಿಗೆ ತಾಯಿಯ ಆಲೋಚನೆ ಸರಿದೋರಲಿಲ್ಲ. ರಾಮನನ್ನು ಕರೆತಂದು ಅವನಿಗೆ ಪಟ್ಟಕಟ್ಟುವೆನೆಂದು ವನಕ್ಕೆ ಹೊರಟನು ಕೈಕೇಯಿಗೆ ಪಶ್ಚಾತ್ತಾಪವಾಗಿ ತಾನೂ ರಾಮನಿಗೆ ಹೇಳಿಕೊಂಡು ಕರೆತರುವೆನೆಂದು ಭರತನೊಡನೆ ಹೊರಟಳು. ಇವರು ರಾಮನ ಹತ್ತರ ಬಂದು ಪಟ್ಟಕ್ಕೆ ಕೂಡಲು ತಿರುಗಿ ಅಯೋಧ್ಯೆಗೆ ಬರಬೇಕೆಂದು ಬೇಡಿಕೊಂಡ ಕಥೆಯು ಈ ಪಾಠದಲ್ಲಿ ಬಂದಿದೆ.

(ವಾತ್ಸಲ್ಯವನ್ನು) ತೋರಿಸುತ್ತದೆ. ಕೇಕಯ ಮಗಳು ಕೈಕೇಯಿ. ಈ ಪದ್ಯದಲ್ಲಿ ಕವಿಯು ಕೈಕಾ+ದೇವಿ ಎಂಬ ತಪ್ಪು ಪದ ಪ್ರಯೋಗ ಮಾಡಿದ್ದಾನೆ. ರಘುರಾಜನ ಕುಲದಲ್ಲಿ ಹುಟ್ಟಿದವ ರಾಘವ, ರಾಮನು ರಘುಕುಲದಲ್ಲಿ ಹುಟ್ಟಿದ್ದು ಆ ಕುಲಕ್ಕೆ ಶ್ರೇಷ್ಠನಾಗಿದ್ದಾನೆ ಆದ್ದರಿಂದ ಅವನಿಗೆ ರಾಘವೇಶ್ವರನೆಂಬ ಹೆಸರು ಬಂದಿದೆ.

## ೪ ನೇ ನುಡಿ

ಅರ್ – ಸಮರ್ಥನಾಗು ಅಪೆನೆ – ಸಮರ್ಥನಾಗುವೆನೆ? ( ಹಿರಿದು+ಮೆ - ಆದಿಯ – ಪೂರ್ವಕಾಲದ ಪೆರ್ಮೆ ಪೆರ್ಮೆಕಾರ – ಹೆಮ್ಮೆಕಾರ)
ಹೆಮ್ಮೆಕಾರರು – ದೊಡ್ಡವರು ನೆಮ್ಮ – ನಂಬು
ಅ+ಪ್ರಬುದ್ಧ – ತಿಳುವಳಿಕೆಯಿಲ್ಲದವ

**ಸರಳಾರ್ಥ—** ಎಲೇ ತಾಯಿಯೇ ನಾನು ನಿಮ್ಮ ಮಾತನ್ನು ಒಮ್ಮೆಯಾದರೂ ಮೀರಲಿಕ್ಕೆ ಸಮರ್ಥನಾಗುವೆನೇ? (ಇದರೆ ನಾನು ಅರಸನಾಗಲು ಅಯೋಧ್ಯೆಗೆ ಬಂದರೆ) ನನ್ನ ತಂದೆಯಾದ ದಶರಥನು ಮಗನು ತನ್ನ ವಚನವನ್ನು (ಅಪ್ಪಣೆಯನ್ನು) ಮೀರಿದನೆಂದು ಕಳವಳ ಪಡದೆ ಇರಲಾರನು. ನಮ್ಮ ಮಾತು ಏನು? ಪೂರ್ವಕಾಲದ ಈ ಭೂಮಿಯಲ್ಲಿ ಆಗಿಹೋದ ಸತ್ಯವಾರ್ತೆವನ್ನು ನಂಬಿದಂಥ ದೊಡ್ಡವರು (ಹರಿಶ್ಚಂದ್ರ) ಮೊದಲಾದವರು ತಿಳುವಳಿಕೆ ಇಲ್ಲದವರೇನು? (ಅವರು ಕಡೆತನಕ ವಚನ ಪಾಲಿಸಿದರು.) ಹೀಗೆಂದು ರಾಮಚಂದ್ರನು ಮಾತಾಡಿದನು.

ವಿ ವಿ— ಚತುರನಾದ ರಾಮನು ಪೂರ್ವಕಾಲದ ದೊಡ್ಡವರ ಉದಾಹರಣೆ ಕೊಟ್ಟು ತಾನು ಅಯೋಧ್ಯೆಗೆ ಬಾರದಿರುವ ಕಾರಣವನ್ನು ಹೇಳಿ, ಭರತ-ಕೈಕೇಯಿಯರನ್ನು ಸಮಾಧಾನ ಪಡಿಸಿದನು.

## ೫ ನೇ ನುಡಿ

ಪಾದುಕೆ – ಹಾವುಗೆ, ಪಾದರಕ್ಷೆ ಚಿತ್ತೈಸಿ – ದಯಪಾಲಿಸಿರಿ ಇಹೆ – ಇರುವೆ
ಮೇದಿನಿ – ಭೂಮಿ ನಿವೇದಿಸು – ಅರ್ಪಿಸು, ಕೊಡು
ತನು – ಶರೀರ ಅನಲ – ಬೆಂಕಿ

ಸರಳಾರ್ಥ— ಹಾಗಾದರೆ, "ರಾಜಶ್ರೇಷ್ಠನೇ (ನೀವು ಬರಲು ಒಪ್ಪದಿದ್ದರೆ) ನಿಮ್ಮ ಹಾವುಗೆಗಳನ್ನು ದಯಪಾಲಿಸಿರಿ. (ಅವು) ದೇವರ (ನಿಮ್ಮ ನಿಜವಾದ) ಪಾದಗಳೆಂದೇ ತಿಳಿದು (ಅವುಗಳ) ಸೇವೆ ಮಾಡಿಕೊಂಡು ಇರುವೆನು. ಹದಿನಾಲ್ಕು ವರುಷ ಭೂಮಿಯನ್ನು ಕಾಪಾಡಿಕೊಂಡು ಇರುವೆನು. (ಆಮೇಲೆ) ನೀವು ಬಾರದಿದ್ದರೆ ಈ ದೇಹವನ್ನು ಬೆಂಕಿಗೆ ಅರ್ಪಿಸುವೆನು" ಎಂದು ಭರತನು ಅಂದನು.

ವಿ. ವಿ— ಈ ಪಾಠದಲ್ಲಿ ಕವಿಯು ಭರತನ ಬಂಧುಪ್ರೇಮವನ್ನೂ ಕೈಕೆಯಿಯ ಅನುತಾಪವನ್ನೂ, ರಾಮನ ಹಿರಿಮೆಯನ್ನೂ ಮನ ಹಿಡಿಯುವಂತೆ ಚನ್ನಾಗಿ ರೂಪಿಸಿದ್ದಾನೆ.

### ಬಿಡಿಸಿದ ಅಭ್ಯಸನಗಳು

೧. ತಂದೆ ಸತ್ತ ಬಳಿಕ ಹಿರಿಯಣ್ಣನಾದ ನೀನೇ ನನಗೆ ತಂದೆ, ಸೀತಾದೇವಿ ತಾಯಿಯು. ಮಕ್ಕಳ ಮನಸ್ಸನ್ನು ನೋಯಿಸದೆ ಅರಸನಾಗಬೇಕೆಂದು ಭರತನು ಪ್ರತಿಪಾದಿಸಿದ್ದಾನೆ.

೨. 'ನೀನೆ ನನಗೆ ತಂದೆ' 'ಸೀತಾದೇವಿಯು ನನಗೆ ತಾಯಿ' 'ಅರಸಾಗದಿರೆ ತಮ್ಮಂದಿರಲಿ ತಾನೊಬ್ಬ ನಿನಗಿಲ್ಲ' 'ನಿಮ್ಮಯ ಪಾದುಕೆಯ ಚಿತ್ತೈಸಿ' ಎಂಬ ಮಾತುಗಳಲ್ಲಿ ಭರತನ ಭ್ರಾತೃಪ್ರೇಮವು ಕಂಡು ಬರುವದು.

೩. ಹಿಂದೆ ಮಾಡಿದ ಕೇಡನ್ನು ಚನ್ನಾಗಿ ಮರೆತು ಇಂದು (ಅಯೋಧ್ಯೆಗೆ ಬಂದು) ಅರಸನಾಗಿ ರಾಜ್ಯ ಪರಿಪಾಲನೆ ಮಾಡು ಎಂದು ಕೈಕೇಯಿಯು ರಾಮಚಂದ್ರನಿಗೆ ಹೇಳಿದಳು.

೪. ಈಗ ಅರಸನಾಗಲು ಒಪ್ಪಿದರೆ ಮಗನು ವಚನ ಪಾಲಿಸಲಿಲ್ಲೆಂದು ತಂದೆಯಾದ ದಶರಥನು ಕಳವಳಿಸದೆ ಇರಲಾರನು. ಹಿಂದಿನ ಕಾಲದಲ್ಲಿ ಸತ್ಯದ ಮಾರ್ಗವನ್ನು ನಂಬಿದ ದೊಡ್ಡವರು ತಿಳಿಗೇಡಿಗಳಾಗದೆ ವಚನ ಪಾಲಿಸಿದರು. ಈ ಕಾರಣಗಳಿಂದ ರಾಮಚಂದ್ರನು ಅರಸನಾಗಲಿಕ್ಕೆ ಒಪ್ಪಲಿಲ್ಲ.

# ೩೧. ಸಿಂಹಗಡ

ಗಡ – ಕೋಟೆ ಪ್ರಭುತ್ವ – ಒಡೆತನ ಶಕ್ತಿ – ಅಧಿಕಾರ
ದುರ್ಗ – ಕೋಟೆ ಕೊತ್ತಳ – ಕೋಟೆಯ ಮೇಲಿನ ಬುರುಜು
ಮನ್ನಣೆ – ಮರ್ಯಾದೆ ಆಯಕಟ್ಟು – ಗಂಡಾಂತರದ ಸ್ಥಳ ಗಂಡಾಂತರ –
ಸಂಭ್ರಮ – ಸಡಗರ ಕಿವಿಗೊಡು – ಮಾತು ಕೇಳು ಕೇಡು
ಸಜ್ಜುಗೊಳಿಸು – ಸಿದ್ಧಮಾಡು ಕಂದು+ಕತ್ತಲೆ – ಕಗ್ಗತ್ತಲೆ
ಗಾಢನಿದ್ರೆ – ದಟ್ಟವಾದ ನಿದ್ದೆ ಕುಗ್ಗು – ಕಡಿಮೆಯಾಗು
ಧೀರ – ಧೈರ್ಯವುಳ್ಳವ

**ಪಾಠದ ಸಾರ—** ದಕ್ಷಿಣದಲ್ಲಿ ಪ್ರಭುತ್ವ ಸ್ಥಾಪಿಸಿದ ಔರಂಗಜೇಬನು, ಶಿವಾಜಿಯ ವಶದಲ್ಲಿದ್ದ ಪ್ರದೇಶವನ್ನು ಗೆಲಿಯುವ ಹೊರತು ತನ್ನ ಅಧಿಕಾರವು ಉಳಿಯುವದಿಲ್ಲವೆಂದು ತಿಳಿದು ಜಸವಂತ ಸಿಂಗನೆಂಬ ಸರದಾರನನ್ನು ಶಿವಾಜಿಯ ಮೇಲೆ ದಂಡೆತ್ತಿ ಕಳಿಸಿದನು. ಜಸವಂತಸಿಂಗನು ಚತುರತನದಿಂದ ಶಿವಾಜಿಯ ಮನವೊಲಿಸಿ, ಕೊಂಡಾಣೆ ಮೊದಲಾದ ದುರ್ಗಗಳನ್ನು ಸಂಪಾದಿಸಿಕೊಂಡನು. ದಿಲ್ಲಿಗೆ ಹೋದ ಶಿವಾಜಿಯು ಸೆರೆಮನೆಯಿಂದ ಪಾರಾಗಿ ಸುರಕ್ಷಿತವಾಗಿ ದಕ್ಷಿಣಕ್ಕೆ ಬಂದಮೇಲೆ ರಾಯಗಡಕ್ಕೆ ಸಮೀಪವಾದ ಆಯಕಟ್ಟಿನ ಕೊಂಡಾಣೆ ದುರ್ಗವನ್ನು ವಶಮಾಡಿಕೊಳ್ಳಲು ತನ್ನ ಬಲಗೈಯಂತಿದ್ದ ತಾನಾಜಿಯನ್ನು ನೇಮಿಸಿದನು. ಮಗನ ಲಗ್ನದ ಸಮಾರಂಭದಲ್ಲಿ ತೊಡಗಿದ ತಾನಾಜಿಯು ಮದುವೆಯನ್ನು ನಿಲ್ಲಿಸಿ ಕೊಂಡಾಣೆ ದುರ್ಗವನ್ನು ತೆಗೆದುಕೊಳ್ಳಲು ಹೊರಟನು. ಈ ಕೆಲಸ ಸುಲಭಸಾಧ್ಯವಿದ್ದಿಲ್ಲ. ಆದರೂ ತಾನಾಜಿಯು ಯುಕ್ತಿ-ಶಕ್ತಿ-ಧೈರ್ಯಗಳಿಂದ ದುರ್ಗವನ್ನು ಗೆದ್ದು, ದುರ್ಗರಕ್ಷಕ ಉದಯಭಾನುವಿನೊಡನೆ ತಾನೂ ಸತ್ತನು. ಕೋಟೆಯು ಮರಾಠರ ವಶವಾಯಿತು. ಈ ಸುದ್ದಿಯನ್ನು ತಿಳಿದು ಶಿವಾಜಿಯು ಬಹಳ ದುಃಖಿತನಾಗಿ— "ಕೋಟೆಯು ಸಿಕ್ಕಿತು. ಆದರೆ ಸಿಂಹವು ಸತ್ತಿತು." ಎಂಬ ಉದ್ಗಾರ ತೆಗೆದನು. ತಾನಾಜಿಯ ನೆನಪಿಗಾಗಿ ಕೊಂಡಾಣೆ ದುರ್ಗಕ್ಕೆ ಸಿಂಹಗಡ ಎಂದು ಹೆಸರಿಟ್ಟನು.

ಬಿಡಿಸಿದ ಅಭ್ಯಾಸನಗಳು

೨. ಕೊಂಡಾಣೆಯು ಕೋಟೆಯು ಮೊಗಲರ ವಶದಲ್ಲಿತ್ತು.

೪. ಭದ್ರವಾದ ಕೊಂಡಾಣೆ ದುರ್ಗವನ್ನು ದೊಡ್ಡ ಸೈನ್ಯದೊಡನೆ ಜಾಗ್ರತೆಯಿಂದ ರಕ್ಷಿಸುತ್ತಿದ್ದುದರಿಂದ ಕೋಟೆಯಲ್ಲಿ ಸೇರುವದು ತಾನಾಜಿಗೆ ಕಠಿಣವೆನಿಸಿತು.

---

# ೩೨. ಕಾಗದದ ಆತ್ಮಕಥೆ

ಅಜ್ಞಾನ – ದಡ್ಡತನ ಓಲೆ – ಕಾಗದ ಆತ್ಮ ಕಥೆ – ತನ್ನ ಕಥೆ

ಗ್ರಂಥ – ಪುಸ್ತಕ ಪ್ರಾಚೀನ – ಮೊದಲಿನ ಕಲೆ – ಬುದ್ಧಿಯ ಕುಶಲತನದ

(ಮೂಲ+ಆಧಾರ) ಮೂಲಾಧಾರ – ಮೂಲ ಆಶ್ರಯ ವಿದ

(ಸ್ವ+ಅರ್ಥ) ಸ್ವಾರ್ಥ – ತನ್ನಹಿತ ಶುಭ್ರವರ್ಣ – ಬಿಳಿಯ ಬಣ್ಣ

ಘನತೆ – ಶ್ರೇಷ್ಠತ್ವ ನಿತ್ಯಕರ್ಮ – ದಿನದ ಕೆಲಸ

ಪಾಠದ ಸಾರ— ಕಾಗದಗಳನ್ನು ಬಿದಿರಿನ ತುಂಡು, ಕಬ್ಬಿನ ಸಿಪ್ಪೆ, ಹರಕು ಅರಿವೆ, ಗಿಡಗಳ ತೊಗಟೆ ಮೊದಲಾದ ಉಪಯೋಗವಿಲ್ಲದ ವಸ್ತುಗಳಿಂದ ಸಿದ್ಧಪಡಿಸಿದ್ದಾರೆ. ಕೈಯಿಂದ ಮಾಡಿದ ಕಾಗದಗಳು ಹರು ಬರತು ಆಗುತ್ತಿದ್ದವು. ಈಗ ಯಂತ್ರಗಳಿಂದ ಆಗುತ್ತಿದ್ದು ಅವು ತೆಳುವಾಗಿಯೂ, ಅಂದವಾಗಿಯೂ ಆಗುತ್ತವೆ. (ಯಂತ್ರಗಳಿಂದ ಹೇಗೆ ತಯಾರಿಸುವರೆಂಬುದನ್ನು ಈ ಪಾಠವನ್ನು ಚನ್ನಾಗಿ ಓದಿ, ಮನನ ಮಾಡಿ ವಿದ್ಯಾರ್ಥಿಗಳು ಹೇಳಲಿ.) ಈಗಿನ ಕಾಲದಲ್ಲಿ ಕಾಗದಗಳ ಉಪಯೋಗ ಬಹಳ. (ಉಪಯೋಗವನ್ನು ಸಹ ಮನನ ಮಾಡಿ ಹೇಳಲಿ.)

ಬಿಡಿಸಿದ ಅಭ್ಯಾಸನಗಳು

೧. ಯಾವನೊಬ್ಬನು ಇಲ್ಲವೆ ಯಾವದೊಂದು ವಸ್ತುವು ತನ್ನ ಬಗ್ಗೆ ತಾನೇ ಹೇಳುವ ಕಥೆಯೇ ಆತ್ಮ ಕಥೆಯು.

೨. ತಾಡ ಎಲೆಗಳ ಮೇಲೆ ಬರೆಯುತ್ತಿದ್ದರು.

೩. ಚೀನದೇಶದಲ್ಲಿ ಮೊದಲು ಶೋಧವಾಯಿತು.

೬. ವರ್ತಮಾನ ಪತ್ರದ ಕಾಗದ, ತಿಳುವು ಕಾಗದ, ದಪ್ಪ

ಕಾಗದ, ಪುಸ್ತಕ ಮುದ್ರಣಕ್ಕೆ ಬೇಕಾಗುವ ಕಾಗದ, ಬೇರೆ ಬೇರೆ ಬಣ್ಣದ ಕಾಗದಗಳು, ಬ್ಲಾಟಿಂಗ ಪೇಪರ (ಒತ್ತುಕರಡ) ಬ್ರಾವುನ ಪೇಪರ (ಹೊದಿಕೆಯ ಕಾಗದ) ವಿದ್ಯಾರ್ಥಿಗಳು ಬರೆಯಲು ಉಪಯೋಗಿಸುವ ಕಾಗದ ಮುಂತಾದವು,

## ೩೩. ವಾಲ್ಮೀಕಿ

ಹೊಂಚಿಕೊಂಡು — ಅಡಗಿಕೊಂಡು ಹೋರಿ — ಉದ್ಯೋಗ ಘೋರ — ದಟ್ಟ,
ನಿರ್ದಯ — ದಯ ವಿಲ್ಲದ ಹೇಸು — ಜಿಗುಪ್ಸೆಗೊಳ್ಳು, ಹಿಂಜರಿ ಭಯಂಕರ
ಜೋಗಿ — ಯೋಗಿ, ಋಷಿ ಮಡದಿ — ಹೆಂಡತಿ ಬೇರು — ಹುಟ್ಟು
ದೋಚಿಕೊಂಡು — ಕದ್ದುಕೊಂಡು ನಿಶ್ಚಲ — ಸ್ಥಿರ ನಿಷ್ಠೆ — ಭಕ್ತಿ
ಬದ್ಧತಿ — ಗಟ್ಟಿಯಾಗಿ ಅಂಟಿಕೊಳ್ಳುವಿಕೆ ಒರಲು — ಕೂಗು, ಬೊಬ್ಬಿಡು,
ವ್ಯಥೆ — ದುಃಖ ಅಕಲ್ಯಾಣ — ಕೇಡು ಪರಿಶುದ್ಧ — ನಿರ್ಮಲ ನರಳು
ಹೃದಯ — ಮನಸ್ಸು ದಿವ್ಯ — ಶ್ರೇಷ್ಠ, ಪವಿತ್ರ

ಪಾತಕ ಕಾರ— ದಾರಿಬಡಿದು ಹೊಟ್ಟೆ ತುಂಬಿಕೊಳ್ಳುತ್ತಿದ್ದ ಬೇಡನು "ಪರಪೀಡೆಯೇ ಪಾಪ, ಪರರನ್ನು ಸಂತೋಷಗೊಳಿಸುವುದೇ ಪುಣ್ಯ, ಪುಣ್ಯಕ್ಕೆ ದೇವರು ಮೆಚ್ಚುವನು. ಸತ್ತಬಳಿಕ ದೇವರ ಬಳಿಗೆ ಹೋಗುವೆವು, ಪರರನ್ನು ಹಿಂಸಿಸುವದರಿಂದ ನಿನಗೆ ಬರುವ ಪಾಪದಲ್ಲಿ ಮಡದಿ ಮಕ್ಕಳು ಪಾಲುಗಾರರು ಆಗುವದಿಲ್ಲ." ಎಂಬ ಋಷಿಗಳ ವಚನ ಕೇಳಿ ಬೇಡನ ಮನದಲ್ಲಿ ಬೆಳಕು ತೋರಿ ಪಾಪವನ್ನು ಕಳೆದುಕೊಳ್ಳುವ ಬಗೆಯನ್ನು ಹೇಳಬೇಕೆಂದು ಬೇಡಿಕೊಂಡನು. ರಾಮನಾಮ ಜಪವೇ ಇದಕ್ಕೆ ಉಪಾಯವೆಂದು ಹೇಳಿ ಋಷಿಗಳು ಹೋದರು. ರಾಮನಾಮ ಜಪದ ಮಹಿಮೆಯಿಂದ ಬಹುಕಾಲದ ಮೇಲೆ, ಅದೇ ಋಷಿಗಳಿಂದ ಬೇಡನು "ವಾಲ್ಮೀಕಿ ಮುನಿ" ಎಂಬ ಹೆಸರನ್ನು ಪಡೆದನು. ಬ್ರಹ್ಮನ ಆಶೀರ್ವಾದದಿಂದ ರಾಮಾಯಣವನ್ನು ರಚಿಸಿ 'ಆದಿಕವಿ' ಎನಿಸಿಕೊಂಡನು.

ಸತ್ಸಂಗದ ಫಲದಿಂದ ಪಾಪಿಗಳ ಪಾಪಗಳೆಲ್ಲ ತೊಳೆದು, ಉತ್ತಮವಾದ ಗತಿಯನ್ನೂ, ಯೋಗ್ಯತೆಯನ್ನೂ ಹೊಂದುವರು ಎಂಬ ಪದಕ್ಕೆ

"ಬೇಡನು ವಾಲ್ಮೀಕಿ ಋಷಿಯೆನಿಸಿಕೊಂಡನು." ಎಂಬ ಕಥೆಯು ಉತ್ತಮ ದೃಷ್ಟಾಂತವಾಗಿದೆ.

### ಬಿಡಿಸಿದ ಅಭ್ಯಸನಗಳು

೧. ಬೇಡನಿದ್ದವನು ಋಷಿಯಾಗಿ ಎಲ್ಲರಿಗಿಂತ ಮೊದಲೇ ರಾಮಾಯಣ ಕಾವ್ಯವನ್ನು ರಚಿಸಿದ್ದರಿಂದ ಆದಿಕವಿ ಎನಿಸಿಕೊಂಡನು.

೨. ನೀನು ಮಾಡುವ ಕೆಲಸದಿಂದ ಬರುವ ಪಾಪವು ನಿನ್ನದು. ಅದರ ಪಾಲು ನಮಗೆ ಬೇಡ. ಎಂದು ಮನೆಯಮಕ್ಕಳು ಉತ್ತರ ಕೊಟ್ಟರು.

೩. ನಾನು ಬಹಳ ಪಾಪ ಮಾಡಿದೆನೆ. ಅದನ್ನು ಹೇಗೆ ಕಳೆದು ಕೊಳ್ಳಬೇಕೆಂಬ ಚಿಂತೆ ಮನದಲ್ಲಿ ಹುಟ್ಟಿತು.

---

## ೩೪. ರವೀಂದ್ರನಾಥ ಠಾಕೂರ

ಪ್ರತಿಭೆ – ಸಮಯ ಸೂಚಕತೆ ಪ್ರತಿಭಾವಂತ – ಸಮಯ ಸೂಚಕತೆಯು
ಮಮತೆ – ಪ್ರೀತಿ ಆದೀನ – ಅಂಕಿತ ಳ್ಳವ, ಕಾವ್ಯರಚಿಸುವ ಶಕ್ತಿಯುಳ್ಳವ
ಕುಂಟನೆವ – ಸಣ್ಣ ಕಾರಣ (ಮನ+ವೃತ್ತಿ) ಮನೋವೃತ್ತಿ – ಮನಸಿನ
ಸೃಷ್ಟಿಸೌಂದರ್ಯ – ಸೃಷ್ಟಿಯ ಒಡವೆಗಳಲ್ಲಿರುವ ಚಲ್ವಿಕೆ ಒಲವು
ಜೊತೆಗೆ – ಸಂಗಡ ಪ್ರವೀಣ – ನಿಪುಣ, ಜಾಣ (ಮಹಾ+ಋಷಿ) ಮಹರ್ಷಿ –
ವ್ಯಾಪಕ – ವಿಸ್ತಾರ ಅಂಜಲಿ – ಬೊಗಸೆ ದೊಡ್ಡಋಷಿ ದೊಡ್ಡ ತಪಸ್ವಿ
ವಂಗೀಯ ಸಾಹಿತ್ಯ – ಬಂಗಾಲಿ ಭಾಷೆಯಲ್ಲಿರುವ ಪುಸ್ತಕಗಳ ಸಮೂಹ
(ಕವಿ+ಇಂದ್ರ) ಕವೀಂದ್ರ – ಕವಿಶ್ರೇಷ್ಠ ಬೊಟ್ಟುಕಚ್ಚು – ಬೆರಗಾಗು
(ಪಶ್ಚಿಮ+ತ್ಯ) ಪಾಶ್ಚಿಮಾತ್ಯ – ಪಶ್ಚಿಮಕ್ಕಿರುವ ದೇಶದವ ಸರಾಗ – ರಾಗಸಹಿತ
(ಸ್ವ+ಅವಲಂಬ) ಸ್ವಾವಲಂಬ – ತನ್ನ ಕೆಲಸ ತಾನೇ ಮಾಡಿಕೊಳ್ಳುವದು
(ಮೇಲ+ಪಂಕ್ತಿ) ಮೇಲ್ಪಂಕ್ತಿ – ಉತ್ತಮ ಪ್ರಕಾರ, ಒಳ್ಳೆಯ ಉದಾಹರಣೆ
ತಜ್ಞ – ನುರಿತವ ಉದಾತ್ತ – ಮೇಲ್ತರದ ಪತ್ನಿ – ಹೆಂಡತಿ
ಆಶ್ರಮ – ಗುಡಿಸಲು (ಸ್ವರ್ಗ+ಸ್ಥ) ಸ್ವರ್ಗಸ್ಥನಾಗು – ಸಾಯು
ವಿಶ್ವವಿದ್ಯಾಲಯ – ಎಲ್ಲಬಗೆಯ ಮೇಲ್ತರದ ವಿದ್ಯೆ ಕಲಿಸುವ ವಿದ್ಯಾಲಯ

ಆದರ್ಶಪ್ರಾಯ – ಉತ್ತಮವಾದ ಮಾದರಿಗೆ ಸಮವಾದದ್ದು

**ಪಾಠದ ಸಾರ—** ರವೀಂದ್ರರು ವಂಗ (ಬಂಗಾಲ) ದೇಶದವರು. ಚಿಕ್ಕವರಿರುವಾಗ ವಿದ್ಯಾಭ್ಯಾಸದ ಕಡೆಗೆ ವಿಶೇಷ ಮನಸ್ಸು ಹತ್ತಲಿಲ್ಲ. ಸೃಷ್ಟಿಸೌಂದರ್ಯವನ್ನು ನೋಡುವುದರಲ್ಲಿ ಕಾಲಕಳೆಯುತ್ತಿದ್ದರು. ತಂದೆಯವರೊಡನೆ ಹಿಮಾಲಯದಲ್ಲಿರುವಾಗ ಅಲ್ಲಿಯ ಸೃಷ್ಟಿಸೌಂದರ್ಯದ ದರ್ಶನದಿಂದ ಸ್ಫೂರ್ತಿಗೊಂಡು ಕಾವ್ಯರಚಿಸತೊಡಗಿದರು. ಇಂಗ್ಲೆಂಡಿಗೆ ಹೋಗಿ ಇಂಗ್ಲೀಷ ಸಾಹಿತ್ಯದ ಅಭ್ಯಾಸವನ್ನು ಚನ್ನಾಗಿ ನೋಡಿಕೊಂಡು ಬಂದರು. ಇವರು ಅನೇಕ ಕಥೆ, ಕಾದಂಬರಿ, ನಾಟಕಗಳನ್ನು ಬರೆದಿದ್ದಾರೆ. ಇವರು ರಚಿಸಿದ 'ಗೀತಾಂಜಲಿ' ಎಂಬ ಕಾವ್ಯವು ಜಗತ್ಪ್ರಸಿದ್ಧವಾಗಿದೆ. ಇದಕ್ಕೆ "ನೊಬೆಲ್ ಪ್ರೈಜ" ಎಂಬ ದೊಡ್ಡ ಬಹುಮಾನ ದೊರೆತಿದೆ. ಸಂಗೀತ ನಾಟಕ, ಚಿತ್ರಕಲೆಗಳಲ್ಲಿಯೂ ನಿಪುಣರಾಗಿದ್ದರು. ಇವರು 'ಶಾಂತಿನಿಕೇತನ' ವೆಂಬಲ್ಲಿ ಸಣ್ಣ ಆದರ್ಶ ಶಾಲೆಯನ್ನು ಕ್ರಿ. ಶ. ೧೯೦೧ ರಲ್ಲಿ ಸ್ಥಾಪಿಸಿದರು. ಅವರ ಜೀವಮಾನದಲ್ಲಿ ಅದು ಬೆಳೆದು 'ವಿಶ್ವಭಾರತಿ' ಎಂಬ ಹೆಸರನ್ನು ಪಡೆದ ವಿಶ್ವವಿದ್ಯಾಲಯವಾಗಿದೆ. ಮಾನವರೆಲ್ಲ ಸಮಾನರು ಎಂಬ ಭಾವನೆ ಬೆಳೆಯುವಂತೆ ಯತ್ನಿಸಿದರು.

ಕವೀಂದ್ರರಾದ ರವೀಂದ್ರರ ಆದರ್ಶ ಜೀವನ, ಅವರು ರಚಿಸಿದ ಗ್ರಂಥಗಳು ಕಟ್ಟಿದ ಸಂಸ್ಥೆಗಳು, ಬೋಧಿಸಿದ ತತ್ವಗಳು ಇವೆಲ್ಲ ಆದರ್ಶ ಪ್ರಾಯವಾಗಿ ಭಾರತದ ಕೀರ್ತಿಯನ್ನು ಜಗತ್ತಿನ ತುಂಬ ಹಬ್ಬಿವೆ.

**ಬಿಡಿಸಿದ ಅಭ್ಯಾಸಗಳು**

೧. ದೇವೇಂದ್ರನಾಥರಲ್ಲಿಯ ಸದಾಚಾರ, ನಿಷ್ಠೆಗಳನ್ನು ಕಂಡು ಜನರು ಅವರಿಗೆ ಮಹರ್ಷಿಗಳೆಂದು ಕರೆಯುತ್ತಿದ್ದರು.

೨. ಸ್ವಾತಂತ್ರ್ಯಪ್ರೀತಿ, ಸೃಷ್ಟಿಸೌಂದರ್ಯದಲ್ಲಿ ಅಭಿರುಚಿ, ಕವಿತೆ ರಚಿಸುವ ಕಡೆಗೆ ಒಲವು ಇವೇ ಮುಂತಾದ ಗುಣಗಳು ರವೀಂದ್ರರಲ್ಲಿ ಕಂಡುಬರುತ್ತಿದ್ದವು.

೩. ಬಂಗಾಲಿ ಮಾಸಪತ್ರಿಕೆಯಲ್ಲಿ ಪ್ರಕಟವಾದ ರವೀಂದ್ರರ ಕವಿತೆಗಳು ಜನರ ಮೆಚ್ಚುಗೆಗೆ ಪಾತ್ರವಾದವು. ಅವುಗಳನ್ನು ಓದಿದ ಜನರಿಗೆಲ್ಲ ರವೀಂದ್ರರು ಕವೀಂದ್ರರಾಗುವರೆಂದು ಅನಿಸಿತು.

೬. ಕವೀಂದ್ರರು ವಂಗಭಾಷೆ, ಪಾಲಿಭಾಷೆ, ಇಂಗ್ಲಿಷ ಭಾಷೆಗಳಲ್ಲಿ ಪ್ರಾವೀಣ್ಯವನ್ನು ಪಡೆದಿದ್ದರು.

೭. ಶಾಂತಿನಿಕೇತನದಲ್ಲಿ 'ವಿಶ್ವಭಾರತಿ' ಎಂಬ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ತಮ್ಮ ಅಪೇಕ್ಷೆ ಸಾಧಿಸಿದರು.

೮. ವಿಶ್ವಭಾರತಿಯ ವಿದ್ಯಾರ್ಥಿಗಳಲ್ಲಿ ಸಾದಾಜೀವನ, ಸರಳ ಸ್ವಭಾವ, ದೇಶಪ್ರೇಮ, ಸ್ವಾವಲಂಬನ, ಉದಾತ್ತ ವಿಚಾರ ಈ ಗುಣಗಳು ಒಡಮೂಡುವವು.

---

# ೩೫. ಘನವಂತನಾದ ಅಶೋಕ

ಘನವಂತ – ದೊಡ್ಡಸ್ತನ ಹೊಂದಿದವ ಮುದ್ರೆ – ಮೊಹರು
ನಾಡನುಡಿ – ನಾಡಿನ ನಿಶಾನೆ ಅಗ್ರಗಣ್ಯ – ಶ್ರೇಷ್ಠ ಅನಾಹುತ – ಕೇಡು
ಹುಮ್ಮಸು – ಹುರುಪು ರಭಸ – ಆವೇಶ ಮಿಡುಕು – ಕಳವಳಗೊಳ್ಳು
ಅಹಿಂಸೆ – (ಪರರಿಗೆ) ಪೀಡೆಕೊಡದಿರುವದು ಸ್ತಂಬ – ಕಂಬ ಪಾಲನೆ –
ಎತ್ತುಗಡೆ – ಸಿದ್ಧತೆ ಚಕ್ರವರ್ತಿ – ರಾಜಾಧಿರಾಜ ರಕ್ಷಣೆ

ಪಾಠದ ಸಾರ— ಘನವಂತನಾದ ಅಶೋಕನು ಚಿಕ್ಕಂದಿನಲ್ಲಿ ತನ್ನ ಪೂರ್ವಜರ ಕೀರ್ತಿಕಥೆ ಕೇಳಿ ಆವೇಶಗೊಂಡು ವೈರಿಗಳನ್ನೆಲ್ಲ ತುಂಡರಿಸಿ ತನ್ನ ರಾಜ್ಯಬೆಳೆಸುವೆನೆಂದು ಪಣತೊಟ್ಟಿದ್ದನು. ಅದರಂತೆ ಭರತಖಂಡದ ಬಹುತರ ಎಲ್ಲ ರಾಜ್ಯಗಳನ್ನು ಗೆದ್ದು ಚಕ್ರವರ್ತಿಯೆನಿಸಿಕೊಂಡನು.

ಕಲಿಂಗ ದೇಶವನ್ನು ಗೆದ್ದರೂ ಎರಡೂ ಸೈನ್ಯಗಳಲ್ಲಿ ಗಾಯಗೊಂಡ ಸೈನಿಕರ ಒರಲಿಕೆಯನ್ನು ಕಣ್ಣಾರೆ ಕಂಡ ಅಶೋಕನ ಹೃದಯ ಕರಗಿ ನೀರಾಯಿತು. ಆದರಿಂದ ಅವನು ಬೌದ್ಧಧರ್ಮವನ್ನು ಸ್ವೀಕರಿಸಿ ಅಹಿಂಸಾ ವ್ರತವನ್ನು ಹಿಡಿದನು. ಪ್ರಜೆಗಳ ಹಿತಕ್ಕಾಗಿ ಕೆರೆಬಾವಿಗಳನ್ನು ಕಟ್ಟಿಸಿ, ದಾರಿಗುಂಟ ಗಿಡ ಹಚ್ಚಿಸಿ, ಉತ್ತಮ ಮಾರ್ಗಮಾಡಿಸಿ, ಊರೂರಿಗೆ ಔಷಧಾಲಯಗಳ ವ್ಯವಸ್ಥೆಮಾಡಿ, ಕಳ್ಳಕಾಕರ ಭಯತಪ್ಪಿಸಿ ಕೀರ್ತಿ ಪಡೆದನು. ಬೌದ್ಧ ತತ್ವಗಳನ್ನು ಬೋಧಿಸಲಿಕ್ಕೆ ದೇಶದೇಶಗಳಿಗೆ ಬೌದ್ಧ ಭಿಕ್ಷುಗಳನ್ನು ಕಳಿಸಿದನು. ಸ್ತಂಭಗಳ ಮೇಲೆಯೂ, ಬಂಡೆಗಲ್ಲುಗಳ

ಮೇಲೆಯೂ ನೀತಿಯ ವಾಕ್ಯಗಳನ್ನು ಬರೆಯಿಸಿದನು. ಸತ್ಯದಿಂದಲೂ, ನ್ಯಾಯದಿಂದಲೂ ರಾಜ್ಯವಾಳಿ ಆದರ್ಶ ಅರಸನೆನಿಸಿಕೊಂಡನು.

ಅಶೋಕನು ಸ್ತಂಭಗಳ ಮೇಲೆ ಕೊರೆಯಿಸಿದ ಚಕ್ರವು ನಮ್ಮ ಧ್ವಜದ ಮೇಲೆ ಇದೆ. ಅಶೋಕ ಚಕ್ರವೂ, ಮೂರು ಸಿಂಹಗಳುಳ್ಳ ಮುದ್ರೆಯೂ ಸ್ವತಂತ್ರ ಭಾರತ ಸರಕಾರದ ಮುದ್ರೆಗಳಾಗಿವೆ.

**ಬಿಡಿಸಿದ ಅಭ್ಯಾಸಗಳು**

೩. ಯುದ್ಧದಲ್ಲಿ ಜಯ ಸಂಪಾದಿಸುವದು ಮಹತ್ವದ್ದಲ್ಲ. ಕಾಳಗದ ಕಡೆಯ ಅನಾಹುತಗಳನ್ನು ಲಕ್ಷಿಸಬೇಕು. ಎಂದು ಗುರುಗಳು ಅಶೋಕನಿಗೆ ಎಚ್ಚರ ಕೊಟ್ಟರು.

೪. "ಇನ್ನು ಮುಂದೆ ರಾಜ್ಯದಾಸೆಗಾಗಿ ಖಡ್ಗವನ್ನು ಎತ್ತಲಾರೆ. ರಾಜ್ಯ ರಕ್ಷಣೆಗೆ ಮಾತ್ರ ಶಸ್ತ್ರ ಧರಿಸಿ ಯುದ್ಧ ಮಾಡುವೆ. ಮಡಿಯುವೆ. ಆದರೆ ನಾನೇ ಪರರ ಮೇಲೆ ಏರಿ ಹೋಗಿ ಹಿಂಸಿಸಲಾರೆ. ರಾಜ್ಯವನ್ನು ಕಸಿದುಕೊಳ್ಳಲಾರೆ. ಇದು ಅನ್ಯಾಯವಾದದ್ದು! ಕ್ರೂರ ಕೃತ್ಯವೇ ಸರಿ!! ನನ್ನ ದೇಶದಲ್ಲಿ ಶಾಂತತೆ ನೆಲಸಲಿ. ಜನರು ಸುಖಿಗಳಾಗಲಿ, ಪ್ರಜಾಹಿತವೇ ನನ್ನ ಕರ್ತವ್ಯವೆಂದು ದುಡಿಯುವೆ" ಹೀಗೆ ಕಳಿಂಗ ಯುದ್ಧದ ತರುವಾಯ ಅಶೋಕನು ನಿಶ್ಚಯಿಸಿದನು.

---

## ೩೬. ಹಂಪೆಯೂ, ವಿಜಯನಗರವೂ

ಕ್ಷೇತ್ರ – ದೊಡ್ಡ ದೇವಸ್ಥಾನವಿರುವ ಪವಿತ್ರಸ್ಥಳ ರಮಣೀಯ – ಮನೋಹರ
ಮಹಾದ್ವಾರ – ಹೆಬ್ಬಾಗಿಲು ಪ್ರಾಕಾರ – ಆವಾರದ ಗೋಡೆ
ವಿಧವಿಧದ – ನಾನಾತರದ ತೀರ್ಥ – ಪವಿತ್ರ ಜಲಾಶಯ ಆಶ್ರಮ – ನೆರವು
(ಪರಮ+ಅವಧಿ) ಅತ್ಯಂತ ಹೆಚ್ಚಿನ ಕೌಶಲ್ಯ –ಜಾಣತನ ಬಲಾಢ್ಯ–ಬಲಿಷ್ಠ
ವಿದ್ವಾಂಸ – ಪಂಡಿತ ಗೋಪುರ – ಹೆಬ್ಬಾಗಿಲು, ಶಿಖರ ಸಂಜ್ಞೆ – ಹೆಸರು
(ಅಷ್ಟ+ದಿಕ್+ಗಜ) ಅಷ್ಟದಿಗ್ಗಜ – ಎಂಟು ದಿಕ್ಕುಗಳಲ್ಲಿರುವ ಆನೆಗಳು

**ಪಾಠದ ಸಾರ—** ಹಂಪೆಯು ಕ್ಷೇತ್ರಸ್ಥಳವು. ಇಲ್ಲಿ ವಿರೂಪಾಕ್ಷ ದೇವಸ್ಥಾನವು ಪ್ರಸಿದ್ಧವಾದದ್ದು. ಇದಲ್ಲದೆ ಗುಂಜೀ ಮಾಧವ, ಉದ್ದಾನ

ವೀರಭದ್ರ, ಸಾಸಿವೆಯ ಗಣೇಶ, ಕಡಲೆಯ ಗಣೇಶ, ಬಡವೀಲಿಂಗ, ವಿಜಯ ವಿಠ್ಠಲ ಸೀತೆ ಮುಂತಾದವರ ಕೌಶಲ್ಯದ ಕೈಗಾರಿಕೆಯ ಗುಡಿಗಳು ನೋಡತಕ್ಕವು ಇರುತ್ತವೆ. ಸಮೀಪದಲ್ಲಿ ತುಂಗಭದ್ರೆಯ ತೀರದಲ್ಲಿ ವಿಜಯನಗರದ ಅರಸರ ಹಾಳು ಅರಮನೆಗಳೂ, ಮಂಚದ ಉಪ್ಪರಿಗೆ, ರಾಣಿಗಿತ್ತಿಯ ಮಹಾಲು, ಅಗಸಗಿತ್ತಿಯ ಮಹಾಲು, ಕುಮಾರ ರಾಮನ ಗರಡೀಮನೆ, ಆನೆಗಳ ಮನೆ, ಕುದುರೆಗಳ ಮನೆ, ಮಹಾನವಮಿಯ ದಿಬ್ಬ ಮುಂತಾದವು ಈಗ ಹಾಳಾಗಿದ್ದರೂ ನೋಡತಕ್ಕಂಥವು ಇವೆ. ಇವಲ್ಲದೆ ಮಾತಂಗ, ಋಷ್ಯಮೂಕ, ಅಂಜನೇಯ ಬೆಟ್ಟಗಳು ಈ ಪ್ರದೇಶಕ್ಕೆ ಸೌಂದರ್ಯವನ್ನು ಉಂಟುಮಾಡಿವೆ (ಇವುಗಳ ವರ್ಣನೆಯನ್ನು ವಿದ್ಯಾರ್ಥಿಗಳು ಮನನ ಮಾಡಿ ಹೇಳಬೇಕು)

**ಬಿಡಿಸಿದ ಅಭ್ಯಾಸಗಳು**

೫. ತುಂಗಭದ್ರೆಯಲ್ಲಿರುವ ತಿರುಗಣೆ ಮಡುವಿಗೆ ಚಕ್ರತೀರ್ಥವೆಂಬ ಹೆಸರು.

೬. ಕೃಷ್ಣ ವಿಜಯನಗರದ ಅರಸರಲ್ಲೆಲ್ಲ ಪ್ರಸಿದ್ಧನಾದವನು. ಇವನ ಆಳಿಕೆಯಲ್ಲಿ ವಿಜಯನಗರದ ರಾಜ್ಯವು ಬಹು ಘನತೆಗೇರಿತು.

೭. ರಾಮರಾಯನ ಆಳಿಕೆಯಲ್ಲಿ ವಿಜಯನಗರದ ರಾಜ್ಯವು ನಾಶವಾಯಿತು.

---

# ೩೭. ಜ್ಞಾನೇಶ್ವರ

ಒಲವು – ಪ್ರೀತಿ ಸೊಗಸು – ಮನಸಿನ ಹಿತ, ಚಂದ ವಂದನೆ – ನಮಸ್ಕಾರ
ಸನ್ಯಾಸ – ಸಂಸಾರ ಬಿಡುವಿಕೆ, ನಾಲ್ಕನೇ ಆಶ್ರಮ ಮಧುಕರಿ – ಭಿಕ್ಷೆ
ನಿವೇದಿಸು – ವಿದಿತಪಡಿಸು, ಅರ್ಪಿಸು ಮಾನ್ಯ – ಮನ್ನಣೆ, ಒಪ್ಪಿಗೆ
ಬಹಿಷ್ಕಾರ – ಕುಲದ ಹೊರಗಿರೋಣ ಸಹಪಂಕ್ತಿ – ಕೂಡಿ ಉಣ್ಣುವಿಕೆ
ಮೇಧಾವಿ – ಬುದ್ಧಿವಂತ ನಿರೂಪಣೆ – ಹೇಳುವಿಕೆ ದರ್ಶನ – ಭೆಟ್ಟಿ
ಪವಾಡ – ಅದ್ಭುತ ಕೃತಿ ಆಖ್ಯಾಯಿಕೆ – ಪುಟ್ಟ ಕಥೆ, ಜನರ ಅಂಬೋಣ
(ಧ್ಯಾನ+ಸ್ಥ) ಧ್ಯಾನಸ್ಥ – ಸ್ಮರಿಸುವವ ಸಮಾಧಿ – ಕುಣಿ

(ಸ+ಅಷ್ಟ+ಅಂಗ) ಸಾಷ್ಟಾಂಗ – ಎಂಟು ಅವಯವಗಳಿಂದ ಕೂಡಿದ

**ಪಾಠದ ಸಾರ—** ಗುರುವಿನ ಹೇಳಿಕೆಯಂತೆ ಸನ್ಯಾಸದಿಂದ ಪ್ರಪಂಚಕ್ಕೆ ತಿರುಗಿದ ವಿಠ್ಠಲ ಪಂತರ ಹೊಟ್ಟೆಯಲ್ಲಿ ಜ್ಞಾನದೇವರು ಹುಟ್ಟಿದರು. ಜನರಿಂದ ಬಹಿಷ್ಕಾರ ಹೊಂದಿದ ವಿಠ್ಠಲಪಂತರು ಗಂಗೆಯಲ್ಲಿ ಹಾರಿ ಪ್ರಾಣಬಿಟ್ಟರು. ಜ್ಞಾನದೇವರು ಮಧುಕರಿಯಿಂದ ಜೀವಿಸುವ ಮಹಾ ವಿಠ್ಠಲ ಭಕ್ತರಾಗಿದ್ದರು. 'ಜ್ಞಾನೇಶ್ವರ', 'ಅಮೃತಾನುಭವ' ಎಂಬ ಗ್ರಂಥಗಳಲ್ಲಿ ಅನೇಕ ಅಭಂಗಗಳನ್ನು ರಚಿಸಿ ಜನರಿಗೆ ಭಕ್ತಿ–ಜ್ಞಾನಗಳ ಮಾರ್ಗಗಳನ್ನು ತೋರಿಸಿದರು. ಇವರು ಅನೇಕ ಪವಾಡಗಳನ್ನು ತೋರಿಸಿದರು. ಕೋಣನಿಂದ ಮಂತ್ರಗಳನ್ನು ಅನ್ನಿಸಿದ್ದನ್ನು ಕಂಡು ಜ್ಞಾನೇಶ್ವರರು ದೇವರ ಅವತಾರವೆಂದು ಭಾವಿಸಿ ಬ್ರಾಹ್ಮಣರು ಇವರಿಗೆ ಶುದ್ಧಿಪತ್ರವನ್ನು ಕೊಟ್ಟರು. ಚಾಂಗದೇವರೆಂಬ ಯೋಗಿಗಳು ಹುಲಿಯನ್ನೇರಿ ಬಂದಿದ್ದರೆ ಜ್ಞಾನೇಶ್ವರರು ತಾವು ಕುಳಿತು ಗೋಡೆಯನ್ನೇ ನಡಿಸಿ ಇದಿರುಗೊಂಡು ಮಹಾ ಪುರುಷರೆನಿಸಿಕೊಂಡರು. ತಾವು ಮಾಡಬೇಕಾದದ್ದನ್ನು ಮಾಡಿದೆವು. ತಮ್ಮ ಜನ್ಮ ಸಾರ್ಥಕವಾಯಿತು ಎನಿಸಿದಾಗ ಆಳಂದಿಯಲ್ಲಿ ಜೀವಂತ ಸಮಾಧಿಸ್ಥರಾದರು. ಮಹಾರಾಷ್ಟ್ರದಲ್ಲಿ ಜ್ಞಾನೇಶ್ವರಿ ಗ್ರಂಥಕ್ಕೆ ಅತಿಶಯವಾದ ಮನ್ನಣೆಯುಂಟು.

## ಬಿಡಿಸಿದ ಅಭ್ಯಸನಗಳು

೭. ಕೊಟ್ಟ ಶಬ್ದಗಳನ್ನು ದಪ್ಪಕ್ಷರಗಳಿಂದ ಬಳಸಿ ವಾಕ್ಯಗಳನ್ನು ರಚಿಸಿದೆ.

ಜ್ಞಾನೇಶ್ವರರು ಅನೇಕ **ತೀರ್ಥಯಾತ್ರೆಗಳನ್ನು** ಮಾಡಿದರು. ವಿಠ್ಠಲಪಂತರು **ಸನ್ಯಾಸದಿಂದ** ಪ್ರಪಂಚಕ್ಕೆ ಮರಳಿದರು. ಸನ್ಯಾಸದಿಂದ ಪ್ರಪಂಚಕ್ಕೆ ತಿರುಗಿದ ವಿಠ್ಠಲಪಂತರಿಗೆ ಜನರು **ಬಹಿಷ್ಕಾರ** **ಹಾಕಿದರು.** ಜ್ಞಾನೇಶ್ವರರು ಅನೇಕ **ಪವಾಡಗಳನ್ನು** ತೋರಿಸಿದರು. ಜ್ಞಾನೇಶ್ವರರು ಜೀವಂತ **ಸಮಾಧಿಯನ್ನು** ಹೊಂದಿದರು. ಸಮಾಧಿಯ ಮುಂದೆ **ನೀರಾಂಜನವನ್ನು** ಹಚ್ಚಿದರು. ಜ್ಞಾನದೇವನು ಮಹಾ **ಮೇಧಾವಿ**ಯಾಗಿದ್ದನು. ಜ್ಞಾನದೇವರು **ಮಧುಕರಿ ಬೇಡಿ** ಜೀವಿಸುತ್ತಿದ್ದರು.

೮. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ದಪ್ಪಕ್ಷರಗಳಿಂದ ತುಂಬಿರಿ.

(೧) ವಿಠ್ಠಲಪಂತರಿಗೆ ದೇವರು ಧರ್ಮ ಇವುಗಳ ಕಡೆಗೆ ಒಲವು ಇತ್ತು. (೨) ಸಹಪಂಕ್ತಿಗೂ ಅವರನ್ನು ಯಾರೂ ಕೂಡಿಸಿಕೊಳ್ಳ ದಾದರು. (೩) ಜ್ಞಾನದೇವನು ಮಾಧುಕರಿ ಬೇಡಿಕೊಂಡು ಬಂದು ಎಲ್ಲರನ್ನೂ ಜೋಪಾನ ಮಾಡುತ್ತಿದ್ದನು.

---

# ೩೮. ಹೊಟ್ಟೆಯೂ, ಅವಯವಗಳೂ

ತೀರ – ಸ್ವಲ್ಪ ಈಡುಮಾಡು – ಸಂಗ್ರಹಮಾಡು ಬಲಾತ್ಕಾರ – ಜುಲುಮೆ ಹಂಗು – ಭಿಡೆ ಖಂಡಿತ – ನಿಶ್ಚಯ ಪೋಷಣೆ – ರಕ್ಷಣೆ ಅನರ್ಥ – ಕೇಡು ಸೇಡು – ಒಳಸೇರು ಬಲಹೀನ – ಬಲವಿಲ್ಲದವ

**ಪಾಠದ ಸಾರ—** ಅವಯವಗಳು ತಾವು ಸ್ವೈಮುರಿದು ದುಡಿದು ಸಂಪಾದಿಸಿದ್ದನ್ನು ಹೊಟ್ಟೆಯು ಕುಳಿತು ತಿನ್ನುವದೆಂದು ಅದರ ಮೇಲೆ ಸಿಟ್ಟಾಗಿ ದುಡಿಯುವದನ್ನೇ ಬಿಟ್ಟು, ತಾವೂ ಸೊರಗಿ ಕಡ್ಡಿಯಂತಾಗಿ ಬಲಗುಂದಿ ಅವಯವ ಸಹಿತವಾದ ಶರೀರವು ನಾಶಹೊಂದಿತು. ಎಂಬ ಕಥೆಯನ್ನು ಅಧಿಕಾರಿಯು ಪ್ರಜೆಗಳಿಗೆ ತಿಳಿಸಿ ಹೇಳಿ, ಪ್ರಜೆಗಳು ಸರಕಾರಕ್ಕೆ ಹಣಕೊಡುವಂತೆ ಮಾಡಿದನು. ಸರಕಾರವೇ ಹೊಟ್ಟೆಯು, ಪ್ರಜೆಗಳೇ ಉಳಿದ ಅವಯವಗಳು ಆಗಿವೆ. ಇವರೆಲ್ಲರೂ ಒಂದೇ ದೇಹದ ಅವಯವಗಳಿದ್ದಂತೆ. ಜನರು ಸಹಕರಿಸಿ ಸರಕಾರಕ್ಕೆ ಎಲ್ಲ ಬಗೆಯಿಂದ ಸಹಾಯ ಮಾಡಿದರೆ ಸರಕಾರದಿಂದ ಪ್ರಜಾಹಿತದ ಕಾರ್ಯಗಳಾಗಿ ದೇಶವು ಬಲಪಡುವದು. ಇಲ್ಲದಿದ್ದರೆ ಅದು ನಾಶಹೊಂದುವದು.

**ಬಿಡಿಸಿದ ಅಭ್ಯಸನಗಳು**

೬. "ಪ್ರಜೆಗಳು ಸರಕಾರದೊಡನೆ ಸಹಕರಿಸಿ ನಡೆದರೆ ಮಾತ್ರ ಸರಕಾರದಿಂದ ಪ್ರಜಾಹಿತದ ಕಾರ್ಯಗಳು ಸುಗಮವಾಗಿ ಸಾಗುವವು" ಎಂಬ ಮಾತನ್ನು ತಿಳಿಸಿ ಹೇಳಲಿಕ್ಕೆ 'ಹೊಟ್ಟೆಯೂ ಅವಯವಗಳೂ'. ಎಂಬ ಕಥೆಯು ಬಹಳ ಹೊಂದಿಕೆಯಾಗುತ್ತಿರುವದರಿಂದ ಈ ಪಾಠಕ್ಕೆ ಹೊಟ್ಟೆಯೂ

ಅವಯವಗಳು ಎಂಬ ಹೆಸರನ್ನು (ತಲೆಬರೆಹವನ್ನು) ಕೊಡಲಾಗಿದೆ.

೭. ಕೆಳಗೆ ಕೊಟ್ಟ ಶಬ್ದಗಳ ಅರ್ಥಗಳನ್ನು ಹೇಳಿದೆ.

ಚಿತ್ತಗೊಡು – ಲಕ್ಷ್ಯಗೊಡು ಮೈಮುರಿದು ದುಡಿ – ಶ್ರಮಪಟ್ಟು
ಸಂಪಾದಿಸು – ದೊರಕಿಸು ನೆನೆಸು – ತಿಳಿ ಕೆಲಸ ಮಾಡು

---

# ೩೯. ಶಿವನ ಮೆಚ್ಚುಗೆ

**ಸಂದರ್ಭ**— ಸರ್ಪಭೂಷಣ ಶಿವಯೋಗಿಗಳೆಂಬವರು ಧರ್ಮ, ನೀತಿ, ಜ್ಞಾನಗಳನ್ನು ಉಪದೇಶ ಮಾಡುವ 'ಕೈವಲ್ಯ ಕಲ್ಪವಲ್ಲರಿ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಅದರೊಳಗಿನ ಶಿವನ ಮೆಚ್ಚುಗೆ ಎಂಬ ಹಾಡನ್ನು ಈ ಪಾಠದಲ್ಲಿ ತೆಗೆದುಕೊಂಡಿದ್ದಾರೆ.

॥ ಪಲ್ಲ ॥ ॥ ಅನುಪಲ್ಲ ॥

ಭೂಷಣ – ಆಭರಣ ಸರ್ಪಭೂಷಣ – ಸರ್ಪವೇ ಆಭರಣವಾಗಿ ಉಳ್ಳವ,
ಕಲ್ಪವಲ್ಲರಿ – ಕಲ್ಪಿಸಿದ್ದನ್ನು ಕೊಡುವ ಬಳ್ಳಿ ಕೈವಲ್ಯ – ಮುಕ್ತಿ ಶಿವ
ವಲ್ಲರಿ – ಬಳ್ಳಿ, ಗೊಂಚಲು ಬಾಹ್ಯ – ಹೊರಗೆ ಡಂಭ – ಆಡಂಬರದ ನಡೆವಳಿ
(ಎಡೆ+ಬಿಡದೆ) ಎಡೆಬಿಡದೆ – ಒಂದೇ ಸಮನೆ ಇರು – ಇರಿಸು, ನಿಲ್ಲಿಸು
ವಂಚಿಸು – ಠಕ್ಕಿಸು ಒಡಲು – ಹೊಟ್ಟೆ, ಮನಸ್ಸು

**ಸರಳಾರ್ಥ**— ಎಲೇ ಹುಚ್ಚನೇ, ನೀನು ಹೊರಗಿನ ಆಡಂಬರದ ನಡೆವಳಿಯನ್ನು ಬಿಡು. ಮನಸಿನೊಳಗೆ ಯಾವಾಗಲೂ ಶಿವನನ್ನು ಇರಿಸು. (ಸದಾ ಧ್ಯಾನಿಸು) ನೀನು ಮನಸ್ಸನ್ನು ವಂಚಿಸಿ (ಮನಸಿನಲ್ಲಿ ಕೆಟ್ಟ ಗುಣಗಳನ್ನಿಟ್ಟುಕೊಂಡು) ಹೊರಗೆ (ಜನರಿಂದ) ಕೀರ್ತಿಯನ್ನು ಹೊಂದಿದರೆ ಶಿವನು ನಿನಗೆ ಮೆಚ್ಚುವನೇ? (ಇಲ್ಲ ಎಂಬರ್ಥ)

೧ ನೇ ನುಡಿ

ಮೆಚ್ಚೆ – ಮೆಚ್ಚುವಂತೆ, ಪ್ರೀತಿಸುವಂತೆ (ಒಳಗೆ+ಆಗುವ) ಒಳಗಾಗೊ –
ಕೃತ್ಯ – ಕೆಲಸ ಮನಸಿನಲ್ಲಿ ಆಗುವ

**ಸರಳಾರ್ಥ**— ಜನರು ಮೆಚ್ಚುವಂತೆ ಲೋಕದಲ್ಲಿ ನಡೆದುಕೊಂಡರೆ, ಏನಾಗುವದು? ಮನಸು ಮೆಚ್ಚುವಂತೆ ನಡೆದುಕೊಳ್ಳುವದೇ ಚಂದ

ವಾದದ್ದು! ಮನಸಿನೊಳಗೆ ಆಗುವ (ನಡೆಯುವ) ಕೃತ್ಯಗಳನ್ನು ಇತರರೇನು ತಿಳಿಯುವರು? ಮನಸಿಗೆ ತಿಳಿಯದ ಒಂದೂ ಕಳ್ಳತನವು ಇಲ್ಲವೇ ಇಲ್ಲ.

### ೨ ನೇ ನುಡಿ

(ಚಿತ್+ಮಯ – ಚಿನ್ಮಯ) ಚಿನುಮಯ – ಜ್ಞಾನಸ್ವರೂಪ

**ಸರಳಾರ್ಥ—** ಎಲೇ ಹುಚ್ಚನೇ, ಜನರು, ಮೆಚ್ಚುವಂತೆ ನಡೆದುಕೊಂಡರೆ (ಅವರು) ನಿನ್ನನ್ನು ಕೈಲಾಸಕ್ಕೆ ಮುಟ್ಟಿಸಬಲ್ಲರೇ? (ಆದರೆ) ಜನರು ಮೆಚ್ಚದಿದ್ದರೆ ಶಿವನು ಬಿಡುವನೇ? ಜನರಲ್ಲಿ ನೀನು ದೊಡ್ಡವನೆನಿಸಿಕೊಂಡರೆ ಜ್ಞಾನಸ್ವರೂಪ ಶಿವನು ನಿನ್ನ ಮನಸಿನೊಳಗಿನ (ಹೀನ ಶ್ರೇಷ್ಠ) ಕೃತ್ಯಗಳನ್ನು ತಿಳಿಯಲಾರನೇ? (ತಿಳಿಯುವನು ಎಂಬರ್ಥ)

### ೩ ನೇ ನುಡಿ

(ಮನದ+ಆಣ್ಮ) ಮನದಾಣ್ಮ – ಮನಸಿನ ಒಡೆಯ, ಶಿವ

ಗುರುಸಿದ್ಧ – ಗುರುವಿನ ಹೆಸರು, ದೇವರು

**ಸರಳಾರ್ಥ—** (ಎಲ್ಲರ) ಮನಸ್ಸಿನಲ್ಲಿ ಶಿವನು ಮನೆಮಾಡಿಕೊಂಡಿರುವನು. ಮನಸ್ಸು ಮೆಚ್ಚುವಂತೆ ನಡೆದುಕೊಂಡರೆ ಶಿವನು ಮೆಚ್ಚುವನು. ಮನಸ್ಸಿಗೆ ಅಂಜಿ ನಡೆಯದೆ, ಜನರಿಗಂಜಿ ನಡೆದರೆ ಮನದ ಒಡೆಯನಾದ ಗುರುಸಿದ್ಧ ದೇವರು ನಮಗೆ ಮರೆಯಾಗುವನು ಅಲ್ಲವೇ?

### ಬಿಡಿಸಿದ ಅಭ್ಯಸನಗಳು

೧. ಜಗತ್ತಿನಲ್ಲಿ ಮನಸು ಮೆಚ್ಚುವಂತೆ ನಡೆದುಕೊಳ್ಳಬೇಕು.

೨. ಶಿವನು ಮನಸ್ಸಿನಲ್ಲಿ ಮನೆಮಾಡಿಕೊಂಡಿರುವನು.

೩. ಮನಸ್ಸಿಗೆ ಅಂಜಿ ನಡೆಯದಿದ್ದರೆ ಶಿವನು ಮರೆಯಾಗುವನು. (ಅಂದರೆ ನಮ್ಮಿಂದ ದೂರಾಗುವನು.)

ಕೆಳಗೆ ಕೊಟ್ಟ ಶಬ್ದಗಳ ಅರ್ಥ ಹೇಳಿದೆ.

ವಂಚಿಸು – ಮೋಸಗೊಳಿಸು   ಚಿನುಮಯ – ಜ್ಞಾನಸ್ವರೂಪ

ಮನದಾಣ್ಮ – ಮನಸಿನ ಒಡೆಯ

# ೪೦. ಜೇನ್ನೊಣಗಳು

ಸಂಗ್ರಹಿಸು – ಕೂಡಿಡು ಸು+ವ್ಯವಸ್ಥಿತವಾಗಿ – ಒಳ್ಳೆಯ ಅಚ್ಚುಕಟ್ಟಾಗಿ ಜೀವನ – ಬದುಕುವಿಕೆ – ವಿಧವೆ – ಗಂಡಸತ್ತವಳು ಮಕರಂದ – ಹೂವಿನ ಶವ – ಹೆಣ ಶ್ರಮವಿಭಾಗ – ಶ್ರಮವನ್ನು ಹಂಚಿಕೊಳ್ಳುವಿಕೆ ರಸ ಪರಾಗ – ಹೂವಿನ ಹುಡಿ ಪಶಂಸು – ಹಬ್ಬಿಗು ಸಮೃದ್ಧಿ – ಸಾಕಷ್ಟು, ಪೂರಕ ಉದ್ಯೋಗ – ಸಹಾಯಕ ಉದ್ಯೋಗ ಉತ್ಪನ್ನ – ಹುಟ್ಟುವಳಿ ವಿಪುಲ ಗಣ್ಯವಾಗು – ಎಣಿಸಲ್ಪಡು ಮಧು – ಜೇನುತುಪ್ಪ

**ಪಾಠದ ಸಾರ—** ಜೇನ್ನೊಣಗಳಲ್ಲಿ ಹೆಜ್ಜೇನು, ತುಡುವೆ ಜೇನು, ನೊಣಜೇನು, ಮತ್ತು ನೊಸರು ಜೇನು ಎಂಬ ನಾಲ್ಕು ಜಾತಿಗಳುಂಟು. ಅವುಗಳಲ್ಲಿ ತುಡುವೆ ಜೇನು ಉತ್ತಮ ಜೇನುತುಪ್ಪವನ್ನು ಸಂಗ್ರಹಿಸುವದರಿಂದ ಬಹಳ ಉಪಯುಕ್ತವಾದದ್ದು ಜೇನ್ನೊಣಗಳು ಒಳ್ಳೆಯ ವ್ಯವಸ್ಥಿತ ರೀತಿಯಿಂದ ಬಾಳುವವು. ಅವುಗಳ ಜೀವನದಿಂದ ಪರಸ್ಪರ ಸಹಕಾರ, ಒಕ್ಕಟ್ಟು, ಪ್ರೇಮ, ಕರ್ತವ್ಯದಕ್ಷತೆ ಹಾಗು ಶ್ರಮವಿಭಾಗ ತತ್ವಗಳನ್ನು ನಾವು ಕಲಿಯಬಹುದು. ಜೇನ್ನೊಣಗಳಿಂದ ಸಂಗ್ರಹವಾದ ತುಪ್ಪವು ಬಲು ಉಪಯುಕ್ತವಾದದ್ದು. ನಮ್ಮ ದೇಶದ ಜನರಿಗೆ ಜೇನ್ನೊಣಗಳನ್ನು ಸಾಕಿ, ತುಪ್ಪವನ್ನು ಸಂಗ್ರಹಿಸುವ ಉದ್ಯೋಗವು ಪೂರಕ ಉದ್ಯೋಗವಾಗಿದೆ. (ಜೇನ್ನೊಣಗಳ ಜೀವನಕ್ರಮವನ್ನು ಅಂದರೆ, ಹುಟ್ಟುವ, ಬಾಳುವ ತುಪ್ಪವನ್ನು ಸಂಗ್ರಹಿಸುವ ಕ್ರಿಯೆಗಳನ್ನು ವಿದ್ಯಾರ್ಥಿಗಳು ಮನನಮಾಡಿ ಹೇಳಲಿ.)

## ಬಿಡಿಸಿದ ಅಭ್ಯಸನಗಳು

೧. ಹೆಣ್ಣು ಜೇನ್ನೊಣವು ದೊಡ್ಡದಾಗಿ ಹಾರಾಡಲಿಕ್ಕೆ ಬಂದ ಮೇಲೆ ಹುಟ್ಟಿನಿಂದ ಹೊರಬೀಳುವದು. ಅನೇಕ ಗಂಡುನೊಣಗಳು ಅದರ ಬೆನ್ನು ಹತ್ತುವವು. ಹೆಣ್ಣು ಜೇನ್ನೊಣವು (ರಾಣಿಯು) ಅತಿ ವೇಗದಿಂದ ಸುತ್ತಾಡುವದು. ಈ ಮೇಲಾಟದಲ್ಲಿ ಎಷ್ಟೋ ಗಂಡು ನೊಣಗಳು ಸೋತು ಮರಳುವವು. ಬಲವುಳ್ಳ ಗಂಡು ನೊಣವು ಒಂದೇ ರಾಣಿಯು ಜೊತೆಗೆ ಹಾರಾಡುವದು. ಆ ಗಂಡು ನೊಣವನ್ನು ಮಾತ್ರ

ಮೆಚ್ಚಿ ತನ್ನ ರಾಜ (ಗಂಡ)ನನ್ನಾಗಿ ಮಾಡಿಕೊಳ್ಳುವದು.

೪. ಒಂದು ಹುಟ್ಟಿನಲ್ಲಿ ಒಂದೇ ರಾಣಿಯು ಉಳಿಯುವದು.

೫. ಜೇನ್ನೊಣಗಳು ಕೆಲಸವನ್ನು ಹಂಚಿಕೊಂಡು ಕೆಲವು ಗೂಡನ್ನು ಕಟ್ಟುವವು. ಕೆಲವು ತತ್ತಿಗಳನ್ನು ಜತನ ಮಾಡುವವು. ಕೆಲವು ಮರಿಗಳನ್ನು ರಕ್ಷಿಸುವವು. ಕೆಲವು ಮಕರಂದವನ್ನು ತಂದು ತುಪ್ಪವನ್ನು ಸಂಗ್ರಹಿಸುವವು. ಕೆಲವು ಸತ್ತ ನೊಣಗಳ ಶವವನ್ನು ಒಯ್ಯುವವು. ಇಷ್ಟೊಂದು ವ್ಯವಸ್ಥಿತ ರೀತಿಯಿಂದ ಬಾಳುವದನ್ನು ನೋಡಿದರೆ ಅವುಗಳ ಜೀವನವು ಬಹಳ ಮಹತ್ವವಾದದ್ದೆಂದು ತಿಳಿಯುವದು.

---

# ೪೧. ಬೆಳವಡಿ ಮುತ್ತಿಗೆ

ಚೊಕ್ಕಟ – ಅಚ್ಚುಕಟ್ಟುತನ ಘೋಷಣೆ – ಧ್ವನಿ, ಕೂಗು ಸಾಹಸಿ – ಗಟ್ಟಿಗ
ದಿಗಿಲು – ಅನುಮಾನ, ಅಂಜಿಕೆ ಊಹಿಸಿ – ತರ್ಕಿಸಿ ಧಾವಿಸಿ – ಓಡಿ
(ಕಣ್+ಕೆಟ್ಟು) ಕಂಗೆಟ್ಟು – ಹೆದರಿ (ಬೆನ್+ಕಾವಲು) ಬೆಂಗಾವಲು – ಬೆನ್ನ
ಚದುರು – ಓಡು ಪತಾಕಿ – ನಿಶಾನಿ ವಾರ್ತೆ – ಸುದ್ದಿ ಹಿಂದಿನ ಕಾವಲು
ಕಂಗಾಲಾಗು – ಹೈರಾಣಾಗು ಪಾದಚಾರಿಣಿ – ಕಾಲ್ನಡಿಗೆಯವಳು
(ಹತ+ಆಶೆ) ಹತಾಶೆ – ಆಶೆ ತಪ್ಪಿಸಿದವಳು ಮೈಮರೆ – ಎಚ್ಚರದಪ್ಪು
ಉಂಬಳಿ – ಇನಾಮು ಔದಾರ್ಯ – ಉದಾರತನ ಕಲಿತನ – ಶೂರತನ
(ಅ+ಪೂರ್ವ) ಅಪೂರ್ವ – ಮೊದಲು ಇಲ್ಲದ, ಮಿಗಿಲಾದ

**ಪಾಠದ ಸಾರ—** ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿಯು ತಂದೆಯ ಆಸ್ತಿಯಲ್ಲಿ ಪಾಲುತೆಗೆದುಕೊಂಡು ತಂಜಾವರದಿಂದ ತಿರುಗಿ ಬರುವಾಗ ಹಾದಿಯಲ್ಲಿ ಬೆಳವಡಿ ಗ್ರಾಮವು ಹತ್ತಿತು. ಅಲ್ಲಿಯ ಸಂಸ್ಥಾನಿಕನಾದ ಈಶಪ್ರಭುವು ಶಿವಾಜಿಗೆ ಶರಣು ಬರಲು ಒಪ್ಪಲಿಲ್ಲ. ಶಿವಾಜಿಯ ಸೈನಿಕರು ಬೆಳವಡಿ ಕೋಟೆಗೆ ಮುತ್ತಿಗೆ ಹಾಕಿದರು. ಈಶಪ್ರಭುವು ಹೆದರಲಿಲ್ಲ. ಮೂರು ತಿಂಗಳು ಮುತ್ತಿಗೆ ಸಾಗಿದರೂ ಕೋಟೆ ವಶವಾಗಲಿಲ್ಲ. ಸೇನಾಪತಿ ದಾದಾಜಿಗೆ ದಿಗಿಲು ಬಿತ್ತು. ಕೋಟೆಯೊಳಗಿನ ಬಣವಿಗೆ ಬೆಂಕಿ ಹಚ್ಚಿಸಿ, ಅಲ್ಲಿ ಅವ್ಯವಸ್ಥೆಯನ್ನು ಉಂಟುಮಾಡಿ ಕೋಟೆ

ಯನ್ನು ನುಗ್ಗಿ ಮರಾಠಾ ಸೈನಿಕರು ಒಳಸೇರಿದರು. ಕೈಗೆ ಕೈ ಕತ್ತಿ ಕಾಳಗ ಪ್ರಾರಂಭವಾಯಿತು. ಈಶಪ್ರಭುವು ಗುಂಡು ಬಡಿದು ಸತ್ತನು. ಅವನ ಧರ್ಮಪತ್ನಿ ಮಲ್ಲಮ್ಮನಿಗೆ ಈ ಸುದ್ದಿ ತಿಳಿದು ಸಿಡಿಲು ಬಡಿದಂತಾದರೂ, ತತ್‌ಕ್ಷಣವೇ ವೀರಾವೇಶಗೊಂಡು ಕಂದ ಎಂಬ ತನ್ನ ಧರ್ಮವೆಂಬ ಕುದುರೆಯನ್ನೇರಿ ರಣಕ್ಕೆ ಬಂದು ವೈರಿಗಳ ರುಂಡವನ್ನು ಚೆಂಡಾಡಿದಳು. ವೈರಿಗಳು ಬೆಚ್ಚಿಬೆರಗಾಗುತ್ತಿದ್ದರು. ಕಾಲು ಮುರಿದ ಕುದುರೆ ಬಿಟ್ಟು ಪಾದಚಾರಿಣಿಯಾಗಿ ಯುದ್ಧ ಮಾಡುತ್ತಿರಲು ದಾದಾಜಿಯು ಹಿಂದಿನಿಂದ ಬಂದು ಮಲ್ಲಮ್ಮನ ಬಲಗೈಯನ್ನು ಕತ್ತರಿಸಲು ಹತಾಶಳಾಗಿ ಮೈಮರೆತು ನೆಲಕ್ಕೆ ಬಿದ್ದಳು. ಅವಳನ್ನು ಶಿವಾಜಿಯ ಬಳಿಗೆ ಒಯ್ಯಲು ವೀರರಮಣಿ ಮಲ್ಲಮ್ಮನನ್ನು ಶಿವಾಜಿಯು ಬಾಯ್ತುಂಬ ಹೊಗಳಿ ಆಕೆಯ ಸಂಸ್ಥಾನವನ್ನಲ್ಲದೆ ತನ್ನವೆರಡು ಊರುಗಳನ್ನು ಉಂಬಳಿ ಹಾಕಿಕೊಟ್ಟು, ಉಡುಗರೆಗಳಿಂದ ಮರ್ಯಾದೆಮಾಡಿ ಕಳಿಸಿದನು. ಶಿವಾಜಿಯ ಔದಾರ್ಯವೂ ಮಲ್ಲಮ್ಮನ ಕಲಿತನವೂ ಅಪೂರ್ವವಾದವುಗಳೇ ಸರಿ.

## ಬಿಡಿಸಿದ ಅಭ್ಯಾಸಗಳು

೧೧. ದಪ್ಪಕ್ಷರಗಳಿಂದ ತೋರಿಸಿದ ಕೊಟ್ಟ ಶಬ್ದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿ ಬರೆದಿದೆ.

ಗುಡ್ಡಕ್ಕೆ ಬೇಗೆ ಹತ್ತಿ ಗಿಡಗಳು ದಣಗಟ್ಟಿ ಉರಿದವು. ಕುರಿಯ ಹಿಂಡಿನಲ್ಲಿ ತೋಳವು ಬರಲು ಕುರುಬನು ಕಂಗೆಟ್ಟು ಕೂಗಿದನು. ಶರಾವತಿಯು ಗೇರುಸೊಪ್ಪೆಯ ಬಳಿಯಲ್ಲಿ ಗುಡ್ಡದ ಮೇಲಿಂದ ಕಗ್ಗಿನೊಳಗೆ **ರಭಸದಿಂದ** ಬೀಳುತ್ತದೆ. ಈ ವರ್ಷ ಬರಗಾಲಬಿದ್ದುದರಿಂದ ಜನರಲ್ಲಿ ಹಾಹಾಕಾರ ಉಂಟಾಗಿದೆ. ಪರೀಕ್ಷೆಯಲ್ಲಿ ಪಾಸಾದ ವಾರ್ತೆ ತಿಳಿದು ನನಗೆ ಆನಂದವಾಯಿತು.

೧೨. ಕೊಟ್ಟ ಕ್ರಿಯಾಪದಗಳು ಏನನ್ನು ಹೇಳುತ್ತವೆಂಬುದನ್ನು ಕೆಳಗೆ ವಿವರಿಸಿದೆ.

ವಶಪಡಿಸಿಕೊಳ್ಳು — ಎಂಬುದು ಬೇರೊಬ್ಬನ ಒಡವೆಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುವುದು ಎಂದು ಹೇಳುವುದು.

ಹತಾಶನಾಗು — ಎಂಬುದು ಆಶೆಯು ಕೈಗೂಡಲಿಲ್ಲವೆಂದು ಹೇಳುವುದು.

ರಂಗಾಲಾಗು— ಎಂಬದು ಹೈರಾಣಾಗು, ದಣಿ ಎಂಬರ್ಥವನ್ನು ಹೇಳುವದು.

ದಿಗಿಲು ಬೀಳು— ಎಂಬದು ಅಂಜಿಕೆಯಾಗು, ಗಡಿಬಿಡಿಯಾಗು ಎಂಬರ್ಥವನ್ನು ಹೇಳುವದು.

ಶರಣು ಬಾ— ಎಂಬದು ಅಧೀನನಾಗು, ಮರೆಹೋಗು ಎಂದು ಹೇಳುವದು.

## ೪೨. ವಿಲಿಯಮ್ ಟೆಲ್

ನೈಸರ್ಗಿಕ – ನಿಸರ್ಗಕ್ಕೆ ಸಂಬಂಧಿಸಿದ, ಸ್ವಾಭಾವಿಕ ದೃಶ್ಯ – ನೋಟ
(ಹಿಮ+ಆಚ್ಛಾದಿತ) ಹಿಮಾಚ್ಛಾದಿತ – ಹಿಮದಿಂದ ಮುಚ್ಚಲ್ಪಟ್ಟ
ದಬ್ಬಾಳಿಕೆ – ದುಡುಕಿನ ಆಳಿಕೆ, ಹೆದರಿಕೆಯ ಆಳಿಕೆ ವಿಧಿಸು – ಆಜ್ಞೆಮಾಡು
ಪ್ರತಿಭಟಿಸು – ಎದುರಿಸು ರುಚಿಸು – ಮನಸಿಗೆ ಬರು ಕೊಡು
(ಸ್ವ+ಅಭಿಮಾನ) ಸ್ವಾಭಿಮಾನ – ಸ್ವಂತದ ಮರ್ಯಾದೆ ಕಾಯ್ದುಕೊಳ್ಳುವವ
ಕಟ್ಟೆ – ಬೀದಿಗಳು ಕೂಡುವ ಸ್ಥಳ ಇಂಗಿತ – ಮನಸಿನ ಗುಟ್ಟು
ಹಸನ್ಮುಖಿ – ನಗೆ ಮುಖದವ ರೇಗು – ಸಿಟ್ಟಿಗೇಳು ಎಚ್ಚರಿಕೆ – ಮುಂಜಾ
ಪಾರುಮಾಡು – ದಾಟಿಸು ಹಂಗುತೊರೆ – ಪರವೆಬಿಡು ತಾತ – ತಂದೆ ಗ್ರತೆ
ನಿರ್ಧಾರಮಾಡು – ನಿಶ್ಚಯಿಸು ಯಶಸ್ಸು – ಜಯ

ಪಾಠದ ಸಾರ— ಸುಮಾರು ಆರುನೂರು ವರ್ಷಗಳ ಹಿಂದೆ ಆಲ್ಬರ್ಟ ಎಂಬ ಆಸ್ಟ್ರಿಯಾದೇಶದ ಅರಸನು ಸ್ವಿಟ್ಸರ್ಲಂಡವನ್ನು ಆಳುತ್ತಿದ್ದನು. ಅವನ ದಬ್ಬಾಳಿಕೆಗೆ ಜನರು ಬೇಸತ್ತು ಬಂಡಾಯ ಹೂಡಿದರು. ಅರಸನ ಪ್ರತಿನಿಧಿಗಳಾದ ಜೆಸ್ಲರ ಮತ್ತು ಲ್ಯಾಂಡನ್‌ಬರ್ಗ ಎಂಬವರ ಕ್ರೂರ ದಬ್ಬಾಳಿಕೆಯನ್ನು ಸಹಿಸದೆ ಅನ್ಯಾಯವನ್ನು ಪ್ರತಿಭಟಿಸಲು ಟೊಂಕಕಟ್ಟಿದವರಲ್ಲಿ ವಿಲಿಯಮ್ ಟೆಲ್ಲನೇ ಮೊದಲಿಗನು. ಅರಸನ ಗೌರವದ ಗುರುತಾದ ಸಂತೆನೆರೆಯುವ ಸ್ಥಳದಲ್ಲಿ ಎತ್ತರವಾದ ಕೋಲಿನ ತುದಿಗಿಟ್ಟ ಟೊಪ್ಪಿಗೆಗೆ ಮಾನಕೊಡುವದು ಸ್ವಾಭಿಮಾನಿಯಾದ ಟೆಲ್ಲನಿಗೆ ರುಚಿಸದೆ ಅದೊಂದು ಸ್ವಿಟ್ಸರ್ಲಂಡದ ಜನರಿಗೆ ಅಸಮಾನವೆಂದು

ಬಗೆದನು. ಅಲ್ಲಿ ಹಾಯ್ದು ಹೋಗುವಾಗ ಅವನೂ, ಅವನ ಮಗನೂ ಆ ಟೊಪ್ಪಿಗೆಗೆ ನಮಸ್ಕರಿಸಲಿಲ್ಲ. ಆದರಿಂದ ಜೆಸ್ಲರನ ಕೋಪಕ್ಕೆ ಒಳಗಾಗಿ ಸೆರೆಮನೆ ಸೇರುವ ಪ್ರಸಂಗ ಬಂತು. ಈ ಸಮಯದಲ್ಲಿ ಟೆಲ್ಲನು ತನ್ನ ಬಿಲ್ಲುಗಾರಿಕೆಯ ಕೌಶಲ್ಯವನ್ನು ತೋರಿಸಿ, ಲೂಸರ್ನ ಸರೋವರದಲ್ಲಿ ಬಿರುಗಾಳಿಯೊಳಗೆ ಧೈರ್ಯದಿಂದ ದೋಣಿ ನಡಿಸಿ ದಂಡೆಗೆ ಹತ್ತಿದ ಕೂಡಲೆ ಜಸ್ಲರನನ್ನು ಬಾಣದಿಂದ ಹೊಡೆದು ಕೊಂದನು. ಆ ಹೊತ್ತೇ ಸ್ವಿಸ್ ಜನರು ಸ್ವಾತಂತ್ರ್ಯಗಳಿಸಿದರು. ಸ್ವಿಟ್ಸರ್ಲಂಡವನ್ನು ಪುನಃ ಗೆಲ್ಲಬೇಕೆಂದು ಅರಸನೂ, ಅವನ ಮಗನೂ ಮಾಡಿದ ಪ್ರಯತ್ನ ಯಶ ದೊರೆಯಲಿಲ್ಲ. ವಿಲಿಯಮ್ ಟೆಲ್ಲನು ಸ್ವತಂತ್ರ ಸ್ವಿಟ್ಸರ್ಲಂಡದ ತಾತನೆಂದು ಹೆಸರಾಗಿದ್ದಾನೆ. ಅಲ್ಲಿಯ ಜನರು ಅವನನ್ನು ದೇವತಾ ಪುರುಷನೆಂದು ತಿಳಿಯುವರು.

### ಬಿಡಿಸಿದ ಅಭ್ಯಸನಗಳು

೧ ಸ್ವಿಟ್ಸರ್ಲಂಡದಲ್ಲಿ ಹಿಮಾಚ್ಛಾದಿತ ಪರ್ವತಗಳ ಸಾಲುಗಳು, ರಮಣೀಯ ನೈಸರ್ಗಿಕ ದೃಶ್ಯಗಳೂ ಬಹಳ ಇವೆ. ಆದರಿಂದ ಅದು ಸುಂದರವಾದ ದೇಶವೆಂದು ಹೆಸರಾಗಿದೆ. ಪ್ರವಾಸಿಕರ ಮನಸ್ಸನ್ನು ಸೆಳೆಯುವದರಿಂದ ಬೇರೆಬೇರೆ ದೇಶಗಳ ಜನರು ನೋಡಲಿಕ್ಕೆಂದು ಸ್ವಿಟ್ಸರ್ಲಂಡಕ್ಕೆ ಹೋಗುತ್ತಾರೆ.

೨. ಅರಸನ ಹಾಗು ಅವನ ಪ್ರತಿನಿಧಿಗಳ ಕ್ರೂರ ದಬ್ಬಾಳಿಕೆಗೆ ಬೇಸತ್ತು ಜನರು ಬಂಡಾಯ ಹೂಡಿದರು.

೩. ವಿಲಿಯಮ್ ಟೆಲ್ಲನು ಒಂದೇ ಬಾಣದಿಂದ ದೂರದಲ್ಲಿದ್ದ ಮಗನ ತಲೆಯ ಮೇಲಿನ ಸೇಬುಹಣ್ಣನ್ನು ಹೊಡೆದು ತನ್ನ ಬಿಲ್ಲುಗಾರಿಕೆಯ ಕೌಶಲ್ಯದ ವಿದ್ಯೆಯನ್ನು ತೋರಿಸಿ ಹೆಸರಿಗೆ ಬಂದನು.

---

## ೪೩. ನರಸಿಂಹ ಮೆಹತಾ

ಸಂತ – ದೇವಭಕ್ತ ಜರಿ – ನಿಂದಿಸು ಪರಿವೆ – ಎಚ್ಚರಿಕೆ ಲೀನ – ಓಡಿ ಮಗ್ನನಾಗು – ತೊಡಗು ಲೀಲೆ – ಮಹಿಮೆ ಮುಗ್ಧನು – ಮನಸೋತವನು

(ಭಕ್ತ+ಅಗ್ರಣಿ) ಭಕ್ತಾಗ್ರಣಿ – ಭಕ್ತರಲ್ಲಿ ಶ್ರೇಷ್ಠ ವಿಘ್ನ – ತೊಂದರೆ
ನಿಷ್ಫಲ – ವ್ಯರ್ಥ ಲೂಟಿಮಾಡು – ಸುಲಿಗೆ ಮಾಡು ದೂಷಣೆ – ನಿಂದೆ
ಹುಂಡಿ – ಹಣದೊರೆಯುವುದಕ್ಕಾಗಿ ಬರೆಯಿಸಿಕೊಂಡ ಪತ್ರ
ಆಯುಷ್ಯ – ಬದುಕಿರುವ ಕಾಲ

ಪಾಠದ ಸಾರ— ಸೌರಾಷ್ಟ್ರದಲ್ಲಿರುವ ಜುನಾಗಡವೆಂಬ ಪಟ್ಟಣದಲ್ಲಿ ಸುಮಾರು ಐದುನೂರು ವರ್ಷಗಳ ಹಿಂದೆ ನರಸಿಂಹ ಮೆಹತಾ ಎಂಬ ದೇವಭಕ್ತನು ಆಗಿಹೋದನು. ಒಮ್ಮೆ ಅಣ್ಣನ ಹೆಂಡತಿಯಿಂದ ಅವಮಾನಿತನಾಗಿ ಊರುಬಿಟ್ಟು ಗೋಪಿನಾಥಕ್ಕೆ ಹೋಗಿ ಅನ್ನನೀರುಗಳ ಪರಿವೆಯಿಲ್ಲದೆ ಎಷ್ಟೋ ದಿವಸ ದೇವಸ್ಥಾನದಲ್ಲಿ ದೇವರ ಧ್ಯಾನದಲ್ಲಿ ಮಗ್ನನಾಗಿದ್ದರಿಂದ ಅವನು ಪರಮಭಕ್ತನೆಂದು ಹೆಸರಾದನು. ಬಳಿಕ ಜುನಾಗಡಕ್ಕೆ ತಿರುಗಿ ಬಂದಾಗ ಅಲ್ಲಿಯ ಹರಿಜನರ ಬೇಡಿಕೆಯಂತೆ, ಹರಿಜನ ಕೇರಿಗೆ ಹೋಗಿ ಆದಿನ ರಾತ್ರಿಯೆಲ್ಲ ಹರಿಜನರೊಡನೆ ಹರಿಭಜನೆಯನ್ನು ಮಾಡಿ ಅವರನ್ನು ತೃಪ್ತಿಗೊಳಿಸಿದನು. ಇದು ಧರ್ಮಕ್ಕೆ ವಿರುದ್ಧವಾದದ್ದೆಂದು ವಾದಿಸಿ ಸಮಾಜದವರು ಮೆಹತನಿಗೆ ಅನೇಕ ತೊಂದರೆ ಕೊಟ್ಟರು. ನರಸಿಂಹ ಮೆಹತನು ತನ್ನ ಯೋಗ್ಯ ವಿಚಾರಗಳನ್ನು ಬಿಡಲಿಲ್ಲ. ಅವನಿಗೆ ಕೇಡು ಬಯಸುತ್ತಿರುವವರ ಪ್ರಯತ್ನಗಳೆಲ್ಲ ನಿಷ್ಫಲವಾದವು. ಭಕ್ತಾಗ್ರಣಿ ನರಸಿಂಹ ಮೆಹತನ ಕೀರ್ತಿಯು ಹಬ್ಬಿತು.

ಒಮ್ಮೆ ಕಿಡಿಗೇಡಿಗಳಿಂದ ಪ್ರೇರಿತರಾದ ಯಾತ್ರಿಕರು ನರಸಿಂಹ ಮೆಹತನಲ್ಲಿ ತಮ್ಮ ಹಣಕೊಟ್ಟು ಹುಂಡಿ ಬೇಡಿದರು. ಮೆಹತನು ಶ್ರೀಕೃಷ್ಣನ ಧ್ಯಾನಮಾಡಿ ದ್ವಾರಕೆಯ ಶೇಟ ಶಾಮಲಶಾ (ಶ್ರೀಕೃಷ್ಣ) ಅವನ ಹೆಸರಿನಿಂದ ಹುಂಡಿಬರೆದು ಕೊಟ್ಟನು. ದ್ವಾರಕೆಯಲ್ಲಿ ಶ್ರೀಕೃಷ್ಣನು ಶಾಮಲಶಾನ ವೇಷದಿಂದ ಬಂದು ಯಾತ್ರಿಕರ ಹುಂಡಿ ಸ್ವೀಕರಿಸಿ ಹಣ ಕೊಟ್ಟನಂತೆ! ಕೆಲವರು ಇವನ ವಿರುದ್ಧ ಅರಸನಲ್ಲಿ ದೂರ ಒಯ್ದು ಸೆರೆಮನೆಗೆ ಕಳಿಸಿದರು. ನರಸಿಂಹ ಮೆಹತನು ಭಕ್ತಶ್ರೇಷ್ಠನೆಂಬುದು ಅರಸನಿಗೆ ಮನವರಿಕೆಯಾಗಲು ಕ್ಷಮೆಬೇಡಿ ಬಿಡುಗಡೆಮಾಡಿದನು.

ಮುಂದೆ ಹೆಂಡತಿಯೂ, ಮಕ್ಕಳೂ ತೀರಿದರು. ಎಷ್ಟೋ ಕಷ್ಟಗಳಿಗೆ ಈಡಾದನು. ಈಶನ ಇಚ್ಛೆಯೆಂದು ತಿಳಿದು ಆಯುಷ್ಯವನ್ನೆಲ್ಲ ದೇವರ

ಧ್ಯಾನದಲ್ಲಿಯೇ ಕಳೆದು ಭಕ್ತ ಶಿರೋಮಣಿ ನರಸಿಂಹ ಮೆಹತಾ ಎಂದು ಹೆಸರಾಗಿ ಬಾಳಿಹೋದನು.

**ಬಿಡಿಸಿದ ಅಭ್ಯಸನಗಳು**

೫. ಕೆಳಗೆ ದಪ್ಪಕ್ಷರಗಳಿಂದ ತೋರಿಸಿದ ಕೊಟ್ಟ ಶಬ್ದಗಳನ್ನು ಬಳಸಿ ವಾಕ್ಯಗಳನ್ನು ರಚಿಸಿದೆ.

ಕೇಡು ಮಾಡಬೇಕೆಂದು ಬಯಸುತ್ತಿದ್ದವರ ಪ್ರಯತ್ನಗಳೆಲ್ಲ ನಿಷ್ಫಲವಾಗಿ ಭಕ್ತಾಗ್ರಣಿ ನರಸಿಂಹ ಮೆಹತಾನ ಕೀರ್ತಿ ಹೆಚ್ಚಿತು. ನರಸಿಂಹ ಮೆಹತಾನು ದೇವರ ಧ್ಯಾನದಲ್ಲಿಯೇ ಮಗ್ನನಾಗಿ ಕುಳಿತುಕೊಳ್ಳುವನು. ಜನರ ಪ್ರಯತ್ನಗಳೆಲ್ಲ ನಿಷ್ಫಲವಾದವು. ಸಮಾಜದವರು ನರಸಿಂಹ ಮೆಹತಾನಿಗೆ ಅನೇಕ ವಿಘ್ನಗಳನ್ನು ಒಡ್ಡಿದರು. ಭಜನೆಯಲ್ಲಿ ಮಗ್ನನಾದ ಮೆಹತಾನನ್ನು ಕಂಡು ಜನರೆಲ್ಲ ಮುಗ್ಧರಾದರು.

---

# ೪೪. ನೀತಿಯ ವಚನಗಳು

ನೈದಿಲೆ – ಕಮಲ ಶೃಂಗಾರ – ಶೋಭೆ ಗಗನ – ಆಕಾಶ ನಾರಿ – ಸ್ತ್ರೀ
ಶರಣ – (ಶಿವ) ಭಕ್ತ ನೊಸಲು – ಹಣೆ ಚಕೋರ – ಚಕ್ರವಾಕ ಎಂಬ
(ಅಂಬು+ಧಿ) ಅಂಬುಧಿ – ಸಮುದ್ರ ಭಾನು – ಸೂರ್ಯ ಪಕ್ಷಿ
ಭ್ರಮರ – ಗುಂಗೀಹುಳ, ತುಂಬಿ ಪರಿಮಳ – ಸುವಾಸನೆ ಬಂಡು – ಹೂವಿನ
ಎರೆ – ಹೆಸಿಸು, ಹಾಕು ಬೋನ – ಅನ್ನ, ಎಡೆ ದಿಟ – ನಿಜ ಹುಡಿ
ಚಂದನ – ಶ್ರೀಗಂಧ ಕಂಪು – ಸುವಾಸನೆ ಸುವರ್ಣ – ಬಂಗಾರ
ಒರೆ – ತಿಕ್ಕು ಕಳಂಕ – ಕುಂದು, ಹೀನತ್ವ ಪಾಕುಳ್ಳ – ಅಡುಗೆಯಾದ
ಶರಣು – ನಮಸ್ಕಾರ ಮಾಣೆ – ಬಿಡೆನು

**ಸರಳಾರ್ಥ—** ನೀರಿಗೆ ಕಮಲವೇ ಶೋಭೆಕೊಡುವಂಥದು ಆಕಾಶಕ್ಕೆ ಚಂದನೇ ಶೋಭೆಕೊಡುವಂಥವನು. ಸಮುದ್ರಕ್ಕೆ ತೆರೆ(ಅಲೆ)ಗಳೇ ಶೋಭೆಕೊಡುವಂಥವು. ಸ್ತ್ರೀಗೆ ಸದ್ಗುಣವೇ ಶೋಭೆಕೊಡುವಂಥದು ಅದರಂತೆ ಕೂಡಲ ಸಂಗಮದೇವರೇ, ಶಿವಭಕ್ತರ ಹಣೆಗೆ ವಿಭೂತಿಯೇ ಶೋಭೆಕೊಡುವಂಥದು.

ಚಕ್ರವಾಕ ಪಕ್ಷಿಗೆ ಚಂದ್ರನ ಬೆಳಗಿನ ಚಿಂತೆ, ಸಮುದ್ರಕ್ಕೆ ಸೂರ್ಯನ ಉದಯದ ಚಿಂತೆ, (ಸೂರ್ಯಬರಲು ಸಮುದ್ರವು ಉಕ್ಕೇರುವದು.) ತುಂಬಿಗೆ ಸುವಾಸನೆಯ ಹೂವಿನ ಹುಡಿಯುಣ್ಣುವ ಚಿಂತೆ, ಅದರಂತೆ ಕೂಡಲಸಂಗಮದೇವಾ ನನಗೆ ನಿನ್ನನ್ನು ಬೇಡಿಕೊಳ್ಳುತದೇ(ನೆನಿಸುವದೇ) ಚಿಂತೆ.

ಕಲ್ಲಿನ ಹಾವನ್ನು ಕಂಡರೆ ಹಾಲನ್ನು ಎರೆ ಎಂದು ಅನ್ನುವರು. ನಿಜವಾದ ಹಾವನ್ನು ಕಂಡರೆ ಕೊಲ್ಲಿರೆಂದು ಅನ್ನುವರು. ಊಟಮಾಡಲು ಜಂಗಮರು ಬಂದರೆ ಮುಂದೆ ಹೋಗು ಎನ್ನುವರು. ಆದರೆ ಕೂಡಲ ಸಂಗಮದೇವಾ ಊಟ ಮಾಡದ ಲಿಂಗಕ್ಕೆ ಎಡೆಯನ್ನು ಹಿಡಿವರಯ್ಯಾ! (ಇದೆಂಥ ಭಕ್ತಿ ಎಂಬರ್ಥ)

ಶ್ರೀಗಂಧದ (ಗಿಡ) ಕಡಿದು, ಕೊರೆದು ತೆಯ್ದರೆ (ಪೀಡೆ ಕೊಟ್ಟರೆ ಅದು) ನೊಂದೆನೆಂದು (ತನ್ನ) ಸುಗಂಧವನ್ನು ಬಿಟ್ಟು ಬಿಡುವದೇ (ಸುಗಂಧವನ್ನೇ ಬೀರುವದು) ಬಂಗಾರವನ್ನು ತಂದು ತುಂಡುಮಾಡಿ, ತಿಕ್ಕಿದರೆ, ಬೆಂಕಿಯಲ್ಲಿಟ್ಟು ಕಾಸಿದರೆ ಅದು ತನ್ನ ಬಣ್ಣವನ್ನು ಬಿಟ್ಟು ಕುಂದನ್ನು (ಹೀನತ್ವವನ್ನು) ಹಿಡಿಯುವದೇ? (ಇಲ್ಲ ಮತ್ತಷ್ಟು ಹೊಳೆಯುವದು.)

ತೋಟಿಗನು ಕಬ್ಬನ್ನು ಸಂದು ಸಂದು (ಗಣ್ಣು ಗಣ್ಣಿಗೆ) ಕಡಿದು ಗಾಣದಲ್ಲಿ ಹಾಕಿ (ಅರೆದು ರಸತೆಗೆದು) ಕುದ್ದಿಸಿದರೆ ಅದು ಅಡುಗೆಯಾಗಿ (ಪಾಕವಾಗಿ) ಸಕ್ಕರೆಯಾಗುವದು. ಅದು ತಾನು ಬಹಳ ಕಷ್ಟಪಟ್ಟೆನೆಂದು ಸವಿಯನ್ನು ಬಿಟ್ಟು ಬಿಡುವದೇ? ನನ್ನ ತಂದೆಯಾದ ಚೆನ್ನಮಲ್ಲಿಕಾರ್ಜುನ ದೇವರೆ, ನನ್ನನ್ನು ಕೊಂದರೂ ನಿನಗೆ ಶರಣು ಎಂಬದನ್ನು ಬಿಡಲಾರೆ!

